ವೃಷ ಸಂವತ್ಸರದ

ಸದ್ಬೋಧ ಚಂದ್ರಿಕೆಯ ಕಾಣಿಕೆ ಪುಸ್ತಕ

# ಪಾಣಿಗ್ರಹಣ

(ಐತಿಹಾಸಿಕ ಕಥೆ)

ಲೇಖಕ:—

ರಂಗನಾಥ ತನಯ

ಪ್ರಕಾಶಕ:—

ಯ. ಗು. ಕುಲಕರ್ಣಿ,

ಸಂಪಾದಕ, ಸ. ಚ., ಆನಂದವನ-ಅಗಡಿ.

ಎಪ್ರಿಲ ೧೯೪೧

# ಮುನ್ನುಡಿ

ಇದೊಂದು ಅತ್ಯುಚ್ಚ ಧಾರ್ಮಿಕ ತತ್ವಗಳನ್ನು ಸುಲಭ ರೀತಿಯಲ್ಲಿ ಬೋಧಿಸುವ ಐತಿಹಾಸಿಕ ಕಥೆಯಾಗಿದೆ. ಉಪಗುಪ್ತ ಶ್ರೇಷ್ಠಿ, ಭಗವಾನ್ ಶಿಷ್ಯ, ಪ್ರಿಯದರ್ಶಿ ಅಶೋಕ, ಶೀಲಾದೇವಿ ಮೊದಲಾದ ಶ್ರೇಷ್ಠ ವ್ಯಕ್ತಿಗಳು ಎಲ್ಲರ ಅನುಕರಣಕ್ಕೂ ಯೋಗ್ಯವಾಗಿವೆ. "ವೈರವು ವೈರದಿಂದ ಶಾಂತವಾಗಲಾರದು; ಪ್ರೀತಿಯಿಂದಲೇ ಅದು ಶಾಂತವಾಗುವದು.'' ''ಕೇವಲ ಕೂದಲು ಬಿಳಿಯವಾದ ಮಾತ್ರಕ್ಕೆ ಮಾನವನು ದೊಡ್ಡವನಾಗಲಾರ; ಯಾರಲ್ಲಿ ಸತ್ಯ, ಪುಣ್ಯ, ಪ್ರೀತಿ, ಆತ್ಮನಿರೋಧ, ಸಂಯಮ, ಪಾವಿತ್ರ್ಯ, ಬುದ್ಧಿವಂತಿಕೆ ಮೊದಲಾದ ಸುಗುಣಗಳಿರುವವೋ ಅವರೇ ದೊಡ್ಡವರು."

ಪ್ರಿಯದರ್ಶಿಯ ಸುಕರ್ಮಗಳಿಂದಲೂ, ಶೀಲಾದೇವಿಯ ಸಾಹಸ-ಸ್ವಾರ್ಥತ್ಯಾಗಗಳಿಂದಲೂ ವಾಚಕರು ಆಶ್ಚರ್ಯಭರಿತರಾಗಬಹುದಾಗಿದೆ.

ಇಂಥ ಅತ್ಯುತ್ತಮ ಪುಟ್ಟ ಪುಸ್ತಕವನ್ನು ಶ್ರೀ ರಂಗನಾಥ ತನಯರು ಚಂದ್ರಿಕೆಗಾಗಿ ಬರೆದುಕೊಟ್ಟದ್ದಕ್ಕಾಗಿ ನಾವು ಅವರಿಗೆ ಅತ್ಯಂತ ಋಣಿಯಾಗಿರುವೆವು.

ಆನಂದವನ
೧೬-೩-೪೧

ಪ್ರಕಾಶಕ

# ಪಾಣಿಗ್ರಹಣ.



## ೧

ಸಂಧ್ಯಾಸಮಯವು. ಭಗವಾನ್ ಸವಿತಾ ಸೂರ್ಯನಾರಾಯಣನು ಆಗ ಅಸ್ತಂಗತನಾಗಿದ್ದನು. ಪಶ್ಚಿಮಾ ರಮಣಿಯು ಮುಖವು ಪತಿಯ ಆಗಮನದ ಅತಿರೇಕವಾದ ಆನಂದದಿಂದ ಆರಕ್ತವಾಗಿತ್ತು. ಸಂಧ್ಯಾರಾಗದಿಂದ ಸೃಷ್ಟಿಯ ನೈಸರ್ಗಿಕ ಸೌಂದರ್ಯವು ಮತ್ತಿಷ್ಟು ಬೆಳೆದಿತ್ತು. ಈ ಸಮಯದಲ್ಲಿ ಮೂವರು ಪಥಿಕರು ಮಥುರೆಯ ರಾಜಮಾರ್ಗದಲ್ಲಿ ನಡೆದಿದ್ದರು. ಅವರಲ್ಲಿ ಒಬ್ಬನು ವೃದ್ಧನಿದ್ದನು; ಮತ್ತೊಬ್ಬನು ಮಧ್ಯಮ ವಯಸ್ಕನು; ಇನ್ನೊಬ್ಬನು ಕಿಶೋರ ವಯಸ್ಕನಾದ ಸುಕುಮಾರ ಬಾಲಕನಾಗಿದ್ದನು. ಅವನ ವಯಸ್ಸು ಹದಿನಾಲ್ಕು ವರ್ಷದ್ದಿರಬಹುದು. ಅವರು ದಾರಿ ನಡೆಯುತ್ತ ಮಥುರಾ ಪಟ್ಟಣವನ್ನು ಸಮೀಪಿಸಿದ್ದರು. ಆಗ ಮಧ್ಯಮ ವಯಸ್ಕ ತರುಣನು ವೃದ್ಧನನ್ನು ಕುರಿತು:—"ಲಲ್ಲಾ, ಮಥುರೆಯು ಸಮೀಪಿಸಿತು ಅಲ್ಲಿಗೆ ಹೋದ ಮೇಲೆ ನಮಗೆ ವಿಶ್ರಾಂತಿಯೂ ಆಶ್ರಯವೂ ದೊರೆಯುವವೆ? ನಮ್ಮ ರಹಸ್ಯವು ಗುಪ್ತವಾಗಿ ಉಳಿಯಬಹುದೆ? ಶ್ರೇಷ್ಠಿವರನು ನಮಗೆ ಆಶ್ರಯವೀಯುವನೆಂದೂ, ನಮ್ಮ ರಹಸ್ಯವನ್ನು ಗುಪ್ತವಾಗಿರಿಸುವನೆಂದೂ ನೀವು ವಿಶ್ವಾಸಗೊಂಡಿರುವಿರಿ; ಆದರೆ ಆ ಶ್ರೇಷ್ಠಿಯು ಅಂತಹ ಪ್ರಾಮಾಣಿಕನೂ, ಮಿತ್ರಧರ್ಮಜ್ಞನೂ ಇರುವನಷ್ಟೆ? ಅಲ್ಲಿ ನಮ್ಮ ರಹಸ್ಯಸ್ಫೋಟವಾದರೆ ಇದಕ್ಕಿಂತಲೂ ಘೋರವಾದ ವಿಪತ್ತು ಪ್ರಾಪ್ತವಾಗುವದೆಂದು ಮನಸ್ಸು ತರಹರಗೊಳ್ಳುತ್ತಲಿರುವದು."

"ನೀವು ಚಿಂತಿಸಬೇಡಿರಿ. ಶ್ರೇಷ್ಠಿ ಧನಗುಪ್ತ ಮಹಾಶಯನು ಮಹಾರಾಜರ ಪರಮ ಮಿತ್ರನಿರುವನು; ಇಷ್ಟಲ್ಲವೆ ಅವರ ಅನುಗ್ರಹಿತನೂ ಪರಮ ಸೇವಕನೂ ಆಗಿರುವನು ಅಲ್ಲಿ ನಮ್ಮ ರಹಸ್ಯಸ್ಫೋಟವಾಗುವದೆಂಬ ಭಯವು ತಿಲಾಂಶವಾದರೂ ಇಲ್ಲ." ಎಂದು ಲಲ್ಲನು ತರುಣನಿಗೆ ಧೈರ್ಯದ ಮಾತುಗಳನ್ನು ಹೇಳಿದನು

ಕಿಶೋರವಯಸ್ಕ ಬಾಲಕನು ಪಥಶ್ರಮದಿಂದ ಬಹಳವಾಗಿ ಬಳಲಿದ್ದನು. ಬಹು ದೂರದಿಂದ ನಡೆಯುತ್ತ ಬಂದದ್ದರಿಂದ ಅವನು ಮುಂದೆ.

ಹೆಜ್ಜೆ ಇಡಲಾರದಂತಾಗಿದ್ದನು. ಆಗ ಅವನು ವೃದ್ಧನನ್ನು ಕುರಿತು: "ಮಹಾನಾಯಕ ಲಲ್ಲ, ಇನ್ನೂ ಎಷ್ಟು ದಾರಿಯನ್ನು ನಡೆಯಬೇಕಾಗಿರುವದು? ನನ್ನಿಂದಂತು ಇನ್ನು ಒಂದು ಹೆಜ್ಜೆ ಸಹ ಮುಂದೆ ಹೋಗುವದಾಗದು. ನೋಡಿರಿ! ಕಲ್ಲು-ಮುಳ್ಳುಗಳನ್ನು ತುಳಿತುಳಿದು ನನ್ನ ಪಾದ ಳು ಒಡೆದು ಹೋಗಿರುವವು."

ಬಾಲಕನ ದೀನವಾಣಿಯನ್ನು ಕೇಳಿ ಮಹಾನಾಯಕ ಲಲ್ಲನ ಅಂತಃಕರಣವು ಕರಗಿತು. ಆಗ ಅವನ ಕಣ್ಣುಗಳಿಂದ ಅಶ್ರುಬಿಂದುಗಳೆರಡು ಉದುರಿದವು. ಅವನು ಗದ್ಗದ ಸ್ವರದಿಂದ:—"ಹಾಯ! ಹಾಯ! ಇದೆಂಥಹ ದುರವಸ್ಥೆಯು ನಿನಗೆ ಪ್ರಾಪ್ತವಾಯಿತು!" ಎಂದು ನುಡಿದು ಉಸುರ್ಗರೆದು. ಅವನಿಗೆ ಧೈರ್ಯವನ್ನುಂಟುಮಾಡುವದಕ್ಕಾಗಿ:--' ಇನ್ನೇನೂ ದೂರ ಹೋಗಬೇಕಾಗಿಲ್ಲ. ಇದೋ ಇಲ್ಲಿ ಕಾಣುವದೇ ಮಥರೆಯು"

ಬಾಲಕನು ದುಃಖಿತ ಸ್ವರದಿಂದ ತುಟಿಗಳನ್ನು ನಡುಗಿಸುತ್ತ: "ಇನ್ನೂ ಮಥುರೆಯು ದೂರವಿರುವದು. ನನ್ನಿಂದ ಅಲ್ಲಿಯವರೆಗೆ ನಡೆಯುವದಾಗದು." ಎಂದು ನುಡಿದು ಕಣ್ಣೀರುದುರಿಸುತ್ತ ಮಾರ್ಗದಲ್ಲಿಯೇ ಕುಳಿತುಬಿಟ್ಟನು. ಅವನ ಅವಸ್ಥೆಯನ್ನು ನೋಡಿ ಮಧ್ಯಮವಯಸ್ಕ ತರುಣನ ಅಂತಃಕರಣಕ್ಕೆ ಬರೆಕೊಟ್ಟಂತಾಯಿತು. ಆಗ ಅವನು ಆ ಬಾಲಕನ ಬಳಿಗೆ ಹೋಗಿ:—"ಇಲ್ಲಿ ಕುಳಿತುಕೊಳ್ಳುವದರಿಂದ ಲಾಭವೇನು? ಅದು ನೋಡು ಮಥುರೆಯು, ಇಲ್ಲಿಯೇ ತೀರ ಸಮೀಪದಲ್ಲಿರುವದು. ನೀನು ಇಲ್ಲಿಯೇ ವೇಳೆಗಳೆದರೆ ಪಟ್ಟಣದ ಮಹಾದ್ವಾರವು ಮುಚ್ಚಲ್ಪಡುವದು. ದ್ವಾರವು ಮುಚ್ಚಿತೆಂದರೆ ಬೆಳಗಾಗುವವರೆಗೆ ಊರ ಹೊರಗೇ ಕುಳಿತುಕೊಳ್ಳುವ ಪ್ರಸಂಗವೊದಗುತ್ತದೆ. ಇಲ್ಲಿ ವನ್ಯಪಶುಗಳ ಹಾವಳಿ ಬಹಳ ಬೇಗನೆ ಪಟ್ಟಣವನ್ನು ಸೇರುವದು ಹಿತಕರವು. ಈಗಾಗಲೆ ಸೂರ್ಯನು ಅಸ್ತಂಗತನಾಗಿರುವನು. ಇಲ್ಲಿಯೇ ಕುಳಿತು ವಿಶ್ರಾಂತಿ ಪಡೆಯತೊಡಗಿದರೆ, ಪಟ್ಟಣದ ಹೊರಗೇ ಉಳಿಯಬೇಕಾದೀತು. ಇಷ್ಟು ವೇಳೆಯ ವರೆಗೆ ದಾರೀ ನಡೆದಿರುವೆ; ಇನ್ನೊಂದು ಗಳಿಗೆ ನಡೆದರೆ ಕೆಲಸವಾಯಿತು. ಏಳು; ಬೇಗನೆ ಏಳು" ಎಂದು ನುಡಿದು, ಅವನು ಬಾಲಕನ ಕೈ ಹಿಡಿದು ಮೇಲಕ್ಕೆ ಎಬ್ಬಿಸಿದನು.

ಲಲ್ಲನು ಮುಂದೆ ನಡೆದನು. ತರುಣನು ಬಾಲಕನ ಕೈಯನ್ನು ಹಿಡಿದುಕೊಂಡು ಅವನ ಹಿಂದೆ ಸಾಗಿದನು. ಅವರು ಮಥುರಾ ನಗರಿಯ ದಕ್ಷಿಣದ್ವಾರಕ್ಕೆ ಬಂದರು. ನಗರ ರಕ್ಷಕರು ಅಲ್ಲಿನ ಕಾವಲಿನ ಕೆಲಸ ಮಾಡತೊಡಗಿದ್ದರು. ಅವರು ಯಾತ್ರಿಕರ ವೇಷಧಾರಿಗಳಾದ ಆ ಆಗಂತುಕ ಜನರ ಕಡೆಗೆ ಲಕ್ಷ್ಯಗೊಡಲಿಲ್ಲ. ಆಗ ಆ ಮೂವರೂ ಪಥಿಕರು ನಿರಾತಂಕವಾಗಿ

ಪುರವನ್ನು ಪ್ರವೇಶಿಸಿದರು. ಆಗ ನಾಲ್ಕು ಗಳಿಗೆ ರಾತ್ರಿಯಾಗಿತ್ತು. ರಾತ್ರಿಯ ಸಮಯದಲ್ಲಿ ಧನಗುಪ್ತ ಶ್ರೇಷ್ಠಿಯ ಮನೆಯ ಶೋಧವಾಗುವದು ಕಠಿಣವೆಂದು ಅವರಿಗೆ ತೋರಿತು. ರಾತ್ರಿಯನ್ನು ಎಲ್ಲಿ ಕಳೆಯಬೇಕೆಂದು ಅವರು ಬಹಳವಾಗಿ ವಿಚಾರಿಸಿದರು. ಆಗ ಮಹಾನಾಯಕ ಲಲ್ಲನು ತರುಣನನ್ನು ಕುರಿತು ವಿನಯದಿಂದ:—"ನಿಮ್ಮ ಆಜ್ಞೆಯ ಮೇರೆಗೆ ಇಂದು ರಾತ್ರಿಯನ್ನು ಅತಿಥಿಶಾಲೆಯಲ್ಲಿ ಕಳೆದು, ನಾಳೆ ಪ್ರಾತಃಕಾಲಕ್ಕೆ ಧನಗುಪ್ತ ಶ್ರೇಷ್ಠಿಯ ಮನೆಯನ್ನು ಶೋಧಿಸಬೇಕೆಂದು ನಾನು ಇಚ್ಛಿಸುವೆನು" ಎಂದು ನುಡಿದು, ಆವನು ಬಳಿಯಲ್ಲಿದ್ದ ಬಾಲಕನ ಮುಖವನ್ನು ನೋಡಿ:-'ಎಂದೂ ದಾರಿಯನ್ನು ನಡೆಯದ ಇವರಿಗೆ ಬಹಳೇ ಶ್ರಮವಾಗಿರುವದು. ಇನ್ನು ಮೇಲೆ ಧನಗುಪ್ತ ಶ್ರೇಷ್ಠಿಯ ಮನೆಯನ್ನು ಹುಡುಕುತ್ತ ತಿರುಗಾಡುವದರಿಂದ ಇವರಿಗೆ ಮತ್ತಿಷ್ಟು ಶ್ರಮವಾಗುವದು; ನಿಮ್ಮ ಮನಸ್ಸಿಗೆ ಯೋಗ್ಯ ಕಂಡಂತೆ ಆಜ್ಞೆಯಾಗಬೇಕು.''

"ರಾತ್ರಿಯನ್ನು ಅತಿಥಿಶಾಲೆಯಲ್ಲಿ ಕಳೆದು, ಮುಂಜಾನೆ ಧನಗುಪ್ತ ಶ್ರೇಷ್ಠಿಯ ಮನೆಯನ್ನು ಶೋಧಿಸುವದೇ ಉಚಿತವು. ನಡೆಯಿರಿ, ಈಗಲೆ ಅತಿಥಿಶಾಲೆಗೆ ಹೋಗೋಣ."

ಆ ಮೂವರೂ ಯಾತ್ರಿಕರು ಸಮೀಪದಲ್ಲಿದ್ದ ಅತಿಥಿಶಾಲೆಯನ್ನು ಪ್ರವೇಶಿಸಿದರು.

— —

## ೨

"ಶ್ರೇಷ್ಠಿವರ ಧನಗುಪ್ತರ ಮನೆಯು ಎಲ್ಲಿರುವದು?"

"ಅಲ್ಲಿ ನೋಡಿರಿ ಎದುರಿಗಿರುವ ದೇವಾಲಯದ ಬೀದಿಯನ್ನು ಹಿಡಿದು ಮುಂದೆ ಹೋಗಿ ಶೋಧಿಸಿರಿ."

ನಾಗರಿಕನೊಬ್ಬನು ಹೀಗೆ ಹೇಳಿದ ಕೂಡಲೆ ಯಾತ್ರಿಕರು ಮುಂದೆ ಹೋಗಿ:—"ಶ್ರೇಷ್ಠಿವರ ಧನಗುಪ್ತ ಮಹಾಶಯರ ಮನೆಯು ಇದೇಯೊ?"

"ಇದೇ ಹೌದು. ಮಹಾಶಯರೆ, ತಾವು ಯಾರು? ಎಲ್ಲಿಂದ ಬಂದಿರಿ? ಒಳಗೆ ಬನ್ನಿರಿ; ಒಳಗೆ ಬನ್ನಿರಿ. ತಮ್ಮ ಪಾದರಜವನ್ನು ಕೆಡಹಿ ಮನೆಯನ್ನು ಪವಿತ್ರಗೊಳಿಸಿರಿ."

ಮಹಾನಾಯಕ ಲಲ್ಲನು ಆ ಪರಮ ಸುಂದರ ಯುವಕನ ಅತಿಶಯವಾದ ನಮ್ರವಾಣಿಯನ್ನು ಕೇಳಿ ಆನಂದಬಟ್ಟನು. ಆ ತರುಣನು ಒಂದು ಸಾಧಾ

ರಣ ತರವ ಮನೆಯಲ್ಲಿ ಬರಹೇಳಿದ್ದರಿಂದ ಲಲ್ಲನಿಗೆ ವಿಸ್ಮಯುವಾಯಿತು ಧನದತ್ತ ಶ್ರೇಷ್ಠಿವರನ ಮನೆಯು ಇಂತಹ ಮಧ್ಯನು ತರಗತಿಯದು ಹೇಗೆಂದು ಅವನು ವಿಚಾರಕ್ಕೊಳಗಾದನು ಆಗ ಅವನು ಶಂಕಿತಮನಸ್ಕನಾಗಿ:—"ಮಹೋದಯರೆ, ಮನಸ್ಸು ಭ್ರಮೆಗೊಂಡಿರುವದು ತಾವೇ ಧನಗುಪ್ತ ಶ್ರೇಷ್ಠಿವರರೇನು?"

"ಶ್ರೀಮಾನ್, ಈ ದಾಸನು ಅವರ ಪುತ್ರನು."

"ನೀವೋ? ನೀವು ಧನಗುಪ್ತಶ್ರೇಷ್ಠಿಗಳ ಮಕ್ಕಳೊ? ಈ ಮನೆಯು ಅವರದೊ?"

"ನಾನು ಧನಗುಪ್ತಶ್ರೇಷ್ಠಿವರರ ಕುಮಾರನು. ಈ ಮನೆಯು ಅವರದೇ."

"ನಿಮ್ಮ ಶುಭನಾಮವೇನು?"

"ಈ ಸೇವಕನ ಹೆಸರು ಉಪಗುಪ್ತನೆಂಬಿರುವದು."

"ಉಪಗುಪ್ತ, ಉಪಗುಪ್ತ! ಹೆಸರು ಚನ್ನಾಗಿದೆ ಶ್ರೇಷ್ಠಿವರರು ಎಲ್ಲಿರವರು?"

"ಪರಮ ಪೂಜ್ಯ ಪಿತಾಜಿಯವರು ಸ್ವರ್ಗವಾಸಿಗಳಾಗಿ ಎಂಟು ವರ್ಷಗಳಾದವು"

"ಸ್ವರ್ಗವಾಸಿಗಳಾಗಿರುವರೆ? ಧನಗುಪ್ತಶ್ರೇಷ್ಠಿವರರು ಸ್ವರ್ಗವಾಸಿಗಳಾಗಿ ಎಂಟು ವರ್ಷಗಳಾದವೆ?" ಎಂದು ಮಹಾನಾಯಕ ಲಲ್ಲನು ನಿಟ್ಟುಸಿರು ಬಿಟ್ಟು ಕೇಳಿದನು.

"ಹೌದು." ಎಂದು ಉಪಗುಪ್ತ ಶ್ರೇಷ್ಠಿವರನು ನುಡಿದು, ವಿಧೇಯತೆಯಿಂದ:—"ಮಹಾಶಯರೇ, ತಂದೆಯವರಿಲ್ಲವೆಂದು ನೀವು ಅನುಮಾನಪಡದೆ ನನ್ನ ಆತಿಥ್ಯವನ್ನು ಸ್ವೀಕರಿಸಿರಿ."

ಉಪಗುಪ್ತನು ಲಲ್ಲನ ಕಾಲುಗಳಿಗೆರಗಿದನು. ಆಗ ಅವನನ್ನು ಹಿಡಿದೆತ್ತಿ, ಬಾಹುಪಾಶಗಳಿಂದ ಬಿಗಿದು ಲಲ್ಲನು:–"ನಿಮ್ಮ ತಂದೆಯವರ ಲಕ್ಷ್ಮಿಯು ನಿಮ್ಮ ಕೈಬಿಟ್ಟಿತೆಂದು ತೋರುವದು. ಕಾಲಗತಿಯು ವಿಚಿತ್ರವಿರುವದು. ಧನಗುಪ್ತ ಶ್ರೇಷ್ಠಿಯವರು ನೌಕಾ ವ್ಯಾಪಾರಿಗಳಿದ್ದರು ಯವನ, ಚೀನ ಮೊದಲಾದ ದೇಶಗಳೊಡನೆ ಅವರ ಹುಂಡಿಯ ವ್ಯವಹಾರವಿತ್ತು ಹಡಗದಲ್ಲಿ ವ್ಯಾಪಾರ ನಡೆಯಿಸುವವರಾದ ಅವರ ಪುತ್ರನಿಗೆ ಬರಿಗಾಲಿನಿಂದ ರಾಜಮಾರ್ಗದಲ್ಲಿ ನಿಂತು ಅತಿಥಿಸತ್ಕಾರ ಮಾಡುವ ಸಮಯವೊದಗಿರುವದು! ಯಾರ ದ್ವಾರದಲ್ಲಿ ಆನೆಗಳ ಸಾಲುಗಳೂ, ಸೇವಕ-ಸೇವಕಿಯರ

ತಂಪವೂ ಕಾಣುತ್ತಿತ್ತೋ, ಆ ಧನಗುಪ್ತ ಶ್ರೇಷ್ಠಿಗಳ ಮನೆಯು ಇದೇ ಏನ? ಹಾಯ! ಹಾಯ! ವೈಪರೀತ್ಯ ಕಾಲಾ! ನಿನ್ನ ಪ್ರಭಾವವು ಮಹತ್ತರವಾದದು!" ಎಂದು ಲಲ್ಲನು ನುಡಿದು, ಕಣ್ಣೀರುದುರಿಸತೊಡಗಿದನು

ಉಪಗುಪ್ತನ ಕಣ್ಣುಗಳೂ ಸಜಲವಾದವು. ಎಷ್ಟೋ ವೇಳೆಯವರೆಗೆ ಎಲ್ಲರೂ ಸುಮ್ಮನಿದ್ದರು ಅನಂತರದಲ್ಲಿ ಉಪಗುಪ್ತನು:—"ಕಾಲಗತಿಯು ವಿಚಿತ್ರವಾದದ್ದಿರುವದು. ಹಿಂದಿನ ವೈಭವವನ್ನು ನೆನಿಸಿ ದುಃಖಿಸುವದು ಸೂಜ್ಞರೆನಿಸಿಕೊಳ್ಳುವವರ ಶೀಲವಲ್ಲ. ಆರ್ಯರೇ, ನಿಮ್ಮ ಪರಿಚಯ ಮಾಡಿಕೊಟ್ಟು ನನ್ನನ್ನು ಕೃತಾರ್ಥನನ್ನು ಮಾಡಿರಿ. ನೀವು ನನ್ನ ಪಿತೃಗಳ ಸ್ನೇಹಿತರೆಂಬದನ್ನು ನಾನು ಅರಿತೆನು. ನೀವು ನನಗೆ ಪಿತೃಸಮಾನರಿರುವಿರಿ. ನೀವು ಯಾರೆಂಬುದನ್ನು ತಿಳಿಸಿ, ನನ್ನನ್ನು ಆನಂದಗೊಳಿಸಿರಿ."

"ಶ್ರೇಷ್ಠಿಯು ರಾದ ಉಪಗುಪ್ತರೇ, ನಿಮ್ಮಲ್ಲಿ ನಿಮ್ಮ ತಂದೆಯವರಲ್ಲಿದ್ದ ವಿನಯ, ಸೌಜನ್ಯ, ಅತಿಥಿಸತ್ಕಾರಸರಾಯಣತೆ ಮೊದಲಾದ ಸದ್ಗುಣಗಳು ಅವಶಿಷ್ಟವಾಗಿರುವವು ಶ್ರೇಷ್ಠಿವರ ಧನಗುಪ್ತರ ಸಂಪತ್ತನ್ನು ಭೋಗಿಸುವ ಭಾಗ್ಯವು ನಿಮಗಿಲ್ಲ. ಈಗಿನ ನಿಮ್ಮ ದೈನ್ಯಾವಸ್ಥೆಯಲ್ಲಿ ನಮ್ಮ ಪರಿಚಯ ಮಾಡಿಕೊಡುವ ಆವಶ್ಯಕತೆಯಿಲ್ಲ."

ಲಲ್ಲನು ಹೀಗೆ ನುಡಿದು ಅಲ್ಲಿಂದ ಹೊರಡಲಿಕ್ಕೆ ಸಜ್ಜಾದನು ಆಗ ಉಪಗುಪ್ತನು ಕಾತರಧ್ವನಿಯಿಂದ:—"ಆರ್ಯರೇ, ಕೇವಲ ದಾರಿದ್ರ್ಯದ ಕಾರಣಕ್ಕಾಗಿ ಈ ದಾಸನ ಆತಿಥ್ಯತ್ಯಾಗ ಮಾಡಲುಪಕ್ರಮಿಸಿದಿರಾ? ಇದು ನಿಮಗೆ ಭೂಷಣವಲ್ಲ. ಮಹೋದಯರೇ, ನೀವು ನನ್ನ ಆತಿಥ್ಯವನ್ನು ಸ್ವೀಕರಿಸದೆ ಹೊರಟು ಹೋದರೆ, ನಾನು ಪ್ರಾಣತ್ಯಾಗ ಮಾಡುವೆನು. ನಾನು ಎಂದೂ ಸುಳ್ಳಾಡುವದಿಲ್ಲ."

"ಶ್ರೇಷ್ಠಿವರ, ನನ್ನೊಡನೆ ಇನ್ನೂ ಇಬ್ಬರಿರುವರು. ಅಗೋ, ಅಲ್ಲಿ ನಿಂತಿರುವವರೇ ನನ್ನ ಸಂಗಡಿಗರು. ನಾವು ಮೂವರೂ ನಿಮ್ಮ ಆಶ್ರಯ ಪಡೆಯಬೇಕೆಂದೇ ಇಲ್ಲಿಗೆ ಬಂದಿದ್ದೆವು. ಇಂತಹ ವಿಪನ್ನಾವಸ್ಥೆಯಲ್ಲಿದ್ದ ನಿಮಗೆ ನಾನು ತೊಂದರೆ ಕೊಡಲಾರೆವು. ಪರಮಾತ್ಮನು ನಿಮ್ಮ ಕಲ್ಯಾಣ ಮಾಡಲಿ."

"ಮಹಾಶಯರೆ, ನೀವು ಹೊರಟರೆ ನಾನು ನಿಶ್ಚಯವಾಗಿಯೂ ಆತ್ಮತ್ಯಾಗಮಾಡುವೆನು."

"ಶ್ರೇಷ್ಠಿವರರೆ, ನಿಮ್ಮ ಈಗಿನ ದುರವಸ್ಥೆಯಲ್ಲಿ ನಾವು ನಿಮ್ಮಿಂದ ಆತಿಥ್ಯ ಸ್ವೀಕಾರ ಮಾಡದಿರಲಿಕ್ಕೆ ಕಾರಣಗಳುಂಟು. ನಮ್ಮ ಸಲುವಾಗಿ ನೀವು ಇನ್ನೂ ಹೆಚ್ಚಿನ ವಿಪತ್ತುಗಳಿಗೆ ಗುರಿಯಾಗಬಹುದು. ನಿಮ್ಮ ಸದ್ಗುಣಗಳಿಂದ ನನ್ನ

ಮನಸ್ಸು ಪ್ರಸನ್ನವಾಗಿರುವದು. ಅತಿಥಿಸತ್ಕಾರವು ಘಟಿಸಲಿಲ್ಲವೆಂದು ಖೇದಗೊಳ್ಳಬೇಡಿರಿ.

"ಮಹೋದಯರೆ, ನಾನು ಪ್ರಾಣವನ್ನು ಬಿಡುವೆನು."

"ಶ್ರೇಷ್ಠಿಗಳೆ, ಚಂಡಿತನ ಹಿಡಿಯಬೇಡಿರಿ ದಾರಿದ್ರ್ಯದಲ್ಲಿ ತೊಳಲುತ್ತಿರುವ ನಿಮಗೆ ಮತ್ತಿಷ್ಟು ದುಃಖಕೊಡಲು ನನ್ನ ಮನಸ್ಸು ಸಿದ್ಧವಾಗಲೊಲ್ಲದು"

"ಆರ್ಯರೆ, ಇಂದಿನವರೆಗಿದ್ದ ದಾರಿದ್ರ್ಯವು ನನ್ನನ್ನು ನಾಚಿಸಲಿಲ್ಲ: ಆದರೆ ನೀವು ಮಾತ್ರ ಅಯೋಗ್ಯವಾದ ಮಾತುಗಳಿಂದ ನನ್ನನ್ನು ಲಜ್ಜಿತನನ್ನಾಗಿ ಮಾಡತೊಡಗಿರುವಿರಿ"

"ಶ್ರೇಷ್ಠಿರಾಜ, ನಿಮ್ಮನ್ನು ನಾಚಿಸಬೇಕೆಂಬ ಉದ್ದೇಶದಿಂದ ನಾನು ಹಾಗೆ ಮಾತಾಡಲಿಲ್ಲ. ಒಳ್ಳೇದು. ನನ್ನ ಒಡೆಯರ ಆಜ್ಞೆಯೇನಾಗುವದೋ ಅದರಂತೆ ಮಾಡುವೆನು."

"ನಾನೇ ಅವರಿಗೆ ಬೇಡಿಕೊಳ್ಳುವೆನು." ಎಂದು ಉಪಗುಪ್ತನು ನುಡಿದು, ಯುವಕನ ಬಳಿಗೆ ಹೋಗಿ ಅವನ ಚರಣರಜವನ್ನು ಮಸ್ತಕದ ಮೇಲಿರಿಸಿಕೊಂಡನು. ಲಲ್ಲನು ಎಲ್ಲ ಸಂಗತಿಯನ್ನು ತನ್ನ ಸ್ವಾಮಿಗೆ ಸಂಕ್ಷೇಪವಾಗಿ ತಿಳಿಸಿದನು. ಉಪಗುಪ್ತನ ವಿಜ್ಞಾಪನೆಯನ್ನು ಮನ್ನಿಸಿ ಆ ತರುಣನು ಅವನ ಆತಿಥ್ಯವನ್ನು ಸ್ವೀಕರಿಸಲೊಪ್ಪಿದನು. ಅನಂತರದಲ್ಲಿ ಎಲ್ಲರೂ ಮನೆಯೊಳಗೆ ಹೋದರು. ಆಗ ಉಪಗುಪ್ತನು ಲಲ್ಲನನ್ನು ಕುರಿತು: "ಮಹಾಶಯರೇ, ನೀವು ನಿಮ್ಮ ಹಾಗು ಈ ಪೂಜ್ಯ ಮಹನೀಯರ ಪರಿಚಯ ಮಾಡಿಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಿರಿ."

"ಶ್ರೇಷ್ಠಿವರ!" ಮಹಾನಾಯಕ ಲಲ್ಲನು ಖಿನ್ನವಾಣಿಯಿಂದ:— "ಪುರುಷವೇಷಧಾರಿಗಳಾದ ಈ ತರುಣರು ಕಲಿಂಗರಾಜರ ಪಟ್ಟಮಹಿಷಿಯವರಾದ ಮಹಾರಾಣೀ ಚಂದ್ರಲೇಖಾದೇವಿಯವರು; ಹಾಗು ಇವರು ರಾಜಕುಮಾರಿಯವರಾದ ಶೀಲಾದೇವಿಯವರು. ಮಗಧಸಾಮ್ರಾಜ್ಯದಪ್ರತಾಪಶಾಲಿ ಸಮ್ರಾಟನಾದ ಚಂಡಾಶೋಕನು ಕಲಿಂಗರಾಜ್ಯವನ್ನು ನಷ್ಟಗೊಳಿಸಿದನು. ಒಂದು ಲಕ್ಷ ಕಲಿಂಗ ದಂಡಾಳುಗಳು ರಣಭೂಮಿಗೆ ಬಿದ್ದರು. ಕಲಿಂಗರಾಜರಾದ ಮಹೇಂದ್ರಮಹಾರಾಜರು ಇನ್ನೂ ಯುದ್ಧಭೂಮಿಯಿಂದ ಪರಾಙ್ಮುಖರಾಗಿಲ್ಲ. ಅವರು ಎಲ್ಲಿರುವರೆಂಬದೂ ಸದ್ಯಕ್ಕೆ ತಿಳಿದಿಲ್ಲ. ಯುವರಾಜ ಜಿತೇಂದ್ರ ಮಹಾರಾಜರು ಹರದ್ವಾರದಲ್ಲಿ ಸ್ವಾಮಿ ಚಿದಾನಂದರ ಆಶ್ರಮದಲ್ಲಿ ವಿದ್ಯಾಧ್ಯಯನ ಮಾಡತೊಡಗಿರುವರು. ನಾನು ಮಹಾನಾಯಕ ಭಟ್ಟಾರಕ ಪಾದೀಪ ಲಲ್ಲನಿರುವೆನು. ರಾಜಪರಿವಾರವು ಭಯಂಕರವಾದ ವಿಪ

ತ್ತಿಗೆ ಗುರಿಯಾದ್ದರಿಂದ ಈ ಮಹಿಳೆಯರನ್ನು ನಿಮ್ಮ ಆಶ್ರಯದಲ್ಲಿರಿಸ ಬೇಕೆಂದು ಇಲ್ಲಿಗೆ ಬಂದೆನು. ಧನಗುಪ್ತ ಶ್ರೇಷ್ಠಿರಾಜರ ಹೊರತು ಈ ರಾಜ ಅತಿಥಿಗಳಿಗೆ ಯಾರೂ ಆಶ್ರಯ ಕೊಡಲಾರರೆಂದು ನನ್ನ ಭಾವನೆಯು. ನಮ್ಮ ಮಹಾರಾಜರ ಸ್ನೇಹಿತರಾದ ಶ್ರೇಷ್ಠಿವರರು ಸ್ವರ್ಗವಾಸಿಗಳಾಗಿರು ವರು; ಅವರನ್ನು ಆಶ್ರಯಿಸಿದ್ದ ಲಕ್ಷ್ಮಿಯು ವೈಕುಂಠವಾಸಿಯಾಗಿರುವಳು. ವಸ್ತುಸ್ಥಿತಿಯು ಹೀಗಿದ್ದಮೇಲೆ ಮಾಡುವದೇನು? ಚಂಡಾಶೋಕನು ಕಲಿಂಗ ರಾಜಪರಿವಾರವನ್ನು, ಕಡೆಗೆ ಕುಮಾರ ಜಿತೇಂದ್ರನನ್ನು ಹಿಡಿದು ಕೊಟ್ಟವ ಗೆ ದಶಸಹಸ್ರ ಸುವರ್ಣ ಮುದ್ರೆಗಳು ಪುರಸ್ಕಾರವಾಗಿ ದೊರೆಯುವ ವೆಂದು ಡಂಗುರ ಹೊಡೆಯಿಸಿರುವನು. ಯಾರಾದರೂ ರಾಜಪರಿವಾರಕ್ಕೆ ಆಶ್ರಯನಿತ್ತರೆ, ರಾಜದಂಡನೆಗೆ ಗುರಿಯಾಗುವ ಸಂಭವವುಂಟು ಶ್ರೇಷ್ಠಿ ರಾಜ, ನೀವು ಸ್ಥಿತಿವಂತರಾಗಿದ್ದರೆ ಬೇಕಾದ ಕಾರ್ಯವಮಾಡಿ ದಕ್ಕಿಸಿ ಕೊಳ್ಳಬಹುದಾಗಿತ್ತು. ನಿಮ್ಮ ಸ್ಥಿತಿಯು ತೀರ ಚಿಂತಾಜನಕವಿರುವದು ನಮ್ಮ ವಿಪನ್ನಾವಸ್ಥೆಯಲ್ಲಿ ದುರವಸ್ಥೆಯವರಾದ ನಿಮ್ಮನ್ನು ಮತ್ತಿಷ್ಟು ವಿಪತ್ತಿಗೊಳಗಾಗುವಂತೆ ಮಾಡುವದು ಅನ್ಯಾಯವಲ್ಲವೆ? ನಿಮ್ಮ ಆಗ್ರಹ ವಿದ್ದರೆ ಒಂದೆರಡು ದಿನಗಳ ವರೆಗೆ ನಿಮ್ಮ ಆತಿಥ್ಯ ಸ್ವೀಕಾರ ಮಾಡುವೆವು. ನೀವು ನಮ್ಮ ರಹಸ್ಯವನ್ನು ಗುಪ್ತವಾಗಿರಿಸಿರಿ. ನಿಮ್ಮ ಪತ್ನಿಯವರ ಮುಂದೆ ಕೂಡ ವಸ್ತುಸ್ಥಿತಿಯನ್ನು ಹೇಳಲಾಗದು ''

''ನೀವು ಯೋಚಿಸಬೇಡಿರಿ. ನನಗೆ ಎಲ್ಲವೂ ತಿಳಿದಿದೆ '' ಎಂದು ಉಪ ಗುಪ್ತನು ನುಡಿದು, ಆನಂದದಿಂದ:—''ಮಹಾರಾಣಿಯವರ ಹಾಗು ರಾಜ ಪುತ್ರಿಯವರ ಮತ್ತು ತಮ್ಮ ಸೇವೆಯು ಘಟಿಸಿದ್ದರಿಂದ ಆನಂದವಾಗಿದೆ.'' ಎಂದು ನುಡಿದು, ಅಲ್ಲಿಂದ ತೆರಳಿದನು.

---

೩

ಅತಿಥಿಗಳಿಗೆ ವಿಶ್ರಾಂತಿ ಪಡೆಯುವದಕ್ಕಾಗಿ ವ್ಯವಸ್ಥೆ ಮಾಡಿ, ಉಪ ಗುಪ್ತನು ಪತ್ನಿಯ ಬಳಿಗೆ ಹೋಗಿ:—''ಕುಂದ, ನನ್ನ ಸ್ವರ್ಗೀಯ ಜನಕರ ಮಿತ್ರರು ನಮ್ಮ ಮನೆಗೆ ಅತಿಥಿಗಳಾಗಿ ಬಂದಿರುವರು. ಅವರಿಗೆ ಚನ್ನಾಗಿ ಸತ್ಕಾರ ಮಾಡಲಿಕ್ಕೆಬೇಕು.''

ಕುಂದಳು ಪತಿಯ ಮಾತುಗಳನ್ನು ಕೇಳಿ ಕುಂಠಿತಳಾಗಿ:-''ಸ್ವಾಮಿನ್, ಮನೆಯಲ್ಲಿ ಯಾವ ಬಗೆಯ ಸಾಮುಗ್ರಿಗಳೂ ಇರುವದಿಲ್ಲ. ನಾವು ಅತಿಥಿ ಸತ್ಕಾರ ಮಾಡುವ ಬಗೆ ಹೇಗೆ?''

ಉಪಗುಪ್ತನು ವಿಮನಸ್ಕನಾಗಿ ಪತ್ನಿಯ ಮುಖವನ್ನು ನೋಡಹತ್ತಿದನು ಅನಂತರದಲ್ಲಿ ಅವನು ಧೈರ್ಯದಿಂದ:— "ಕುಂದ, ಯಾವ ಬಗೆಯಿಂದಲಾದರೂ ಅತಿಥಿ ಸತ್ಕಾರ ಮಾಡಲಿಕ್ಕೆ ನಿನಗೆ ಸಾಧ್ಯವಿಲ್ಲವೆ? ನಿನ್ನಲ್ಲಿ ಅಲಂಕಾರಗಳೇನಾದರೂ ಇರುವವೆ?''

'ಅಲಂಕಾರಗಳೆಲ್ಲವೂ ಹೋಗಿ ಬಿಟ್ಟಿರವವು. ಮಾರಿದ ಅಲಂಕಾರಗಳು ತಿರುಗಿ ಬರುವವೆ?''

"ಹೆಚ್ಚಿನ ಪಾತ್ರೆಗಳಿದ್ದರೆ ಅವುಗಳನ್ನು ಕೊಟ್ಟು ಅತಿಥಿಸತ್ಕಾರದ ಸಾಮುಗ್ರಿಗಳನ್ನು ತೆಗೆದುಕೊಂಡು ಬಾ.''

"ಅನವಶ್ಯಕವಾದ ಪಾತ್ರೆಗಳೊಂದೂ ಉಳಿದಿಲ್ಲ. ಮುಂದೆ ಉಪಾಯು ವೇನು?''

"ಕುಂದ, ನೀನೇ ಅತಿಥಿಸತ್ಕಾರ ಮಾಡುವ ಉಪಾಯುಗಳನ್ನು ಹೇಳು ಪರಮ ಪೂಜ್ಯರಾದ ಅತಿಥಿಗಳು ನನ್ನ ಆಗ್ರಹಕ್ಕಾಗಿ ಉಳಿದುಕೊಂಡಿರುವರು. ಅವರಿಗೆ ತಕ್ಕ ವ್ಯವಸ್ಥೆ ಮಾಡದಿದ್ದರೆ ಮರ್ಯಾದೆಗೇಡಾಗುವದು.''

ಕುಂದಳು ಏನೋ ಮಾತಾಡಬೇಕೆಂದು ಹವಣಿಸುತ್ತಿರುವಷ್ಟರೊಳಗೆ ಯಾರೋ ಆ ಶ್ರೇಷ್ಠಿಯನ್ನು ಕೂಗಿದರು. ಕೂಡಲೆ ಶ್ರೇಷ್ಠಿಯು ಹೊರಗೆ ಬಂದು ನೋಡುವಷ್ಟರಲ್ಲಿ ಋಣದಾತನು ಎಂಟು-ಹತ್ತು ಜನ ರಾಜಕರ್ಮಚಾರಿಗಳನ್ನು ಕರೆದುಕೊಂಡು ಬಂದಿದ್ದನು. ಆಗ ಅವನು ಶ್ರೇಷ್ಠಿಯನ್ನು ಕುರಿತು:—"ಶ್ರೇಷ್ಠಿ ಉಪಗುಪ್ತರೆ, ನೀವು ನಮಗೆ ಕೊಡತಕ್ಕ ಹಣವನ್ನು ಕೊಡಿರಿ; ಇಲ್ಲವೆ ಕಾರಾಗೃಹಕ್ಕೆ ತೆರಳಿರಿ!''

ಶ್ರೇಷ್ಠಿವರನು ಸಾವುಕಾರನ ಮಾತುಗಳನ್ನು ಕೇಳಿ ಅಂಜಿದನು. ಆಗ ಅವನು ವಿನಯಪೂರ್ವಕವಾಗಿ:--"ಮಿತ್ರರೆ, ಈಗ ನಾನು ಎಷ್ಟು ಕಷ್ಟದಲ್ಲಿ ಬಿದ್ದಿರುವೆನೆಂಬದನ್ನು ನೀವು ತಿಳಿದಿರುವಿರಾ? ಇದಲ್ಲದೆ ಇಂದು ನನ್ನ ಮನೆಗೆ ಪರಮಪೂಜ್ಯರಾದ ಅತಿಥಿಗಳ ಆಗಮನವಾಗಿರುವದು. ಈಗ ನೀವು ದೊಡ್ಡ ಮನಸ್ಸು ಮಾಡದೆ ಅವಸರಬಟ್ಟರೆ ಅನರ್ಥವಾಗುವದು."

ಋಣದಾತನು ಅವಜ್ಞೆಯಿಂದ ನಗುತ್ತ ಉಪಗುಪ್ತನನ್ನು ಕುರಿತು:—ದೊಡ್ಡ ಮನಸ್ಸು ಮಾಡಲಿಕ್ಕೆ ನಾನು ಮೂರ್ಖನಲ್ಲ. ಹಣವೇನೂ ಸಣ್ಣ ಪುಟ್ಟದಲ್ಲ. ನಾನು ಯಾವ ಆಧಾರದ ಮೇಲೆ ದೊಡ್ಡ ಮನಸ್ಸು ಮಾಡಬೇಕು? ನನಗೆ ಕೊಡತಕ್ಕ ಹತ್ತುಸಾವಿರ ಸುವರ್ಣ ಮುದ್ರೆಗಳನ್ನು ಈಗ ಕೊಡದಿದ್ದರೆ, ರಾಜಕರ್ಮಚಾರಿಗಳು ನಿಮ್ಮನ್ನು ಸೆರೆಹಿಡಿದೊಯ್ಯುವರು.''

'ಶ್ರೇಷ್ಠಿ 'ಮಹಾಶಯರೆ!'' ಉಪಗುಪ್ತನು ದೀನವಾಣಿಯಿಂದ:—''ನನಗೆ ನೀವು ಕೆಲ ಕ್ಷಣಗಳ ಅವಕಾಶ ಕೊಡಿರಿ. ಅಷ್ಟರಲ್ಲಿ ನಾನು ನನ್ನ ಪತ್ನಿಯ ಹಾಗು ಅತಿಥಿಗಳ ಸಲುವಾಗಿ ಏನಾದರೂ ವ್ಯವಸ್ಥೆ ಮಾಡುವೆನು.''

ಆ ಪ್ರಧಾನ ರಾಜಕರ್ಮಚಾರಿಯು ಮುಂದೆ ಬಂದು ಉಪಗುಪ್ತನನ್ನು ಕುರಿತು:—''ಮಹೋದಯರೇ, ನಿಮಗೆ ಬೇಕಾದಂತಹ ಸೌಕರ್ಯಗಳನ್ನೊದಗಿಸಿಕೊಡಲಿಕ್ಕೆ ನಾವು ಸಿದ್ಧರಿಲ್ಲ. ನೀವು ನಿಮ್ಮ ಸಾವುಕಾರರ ಹಣವನ್ನು ಈಗಲೆ ಕೊಡುವಿರಾ?''

''ಇಲ್ಲ, ಈಗ ಹಣವಿಲ್ಲ.'' ಉಪಗುಪ್ತನು ನಿರುತ್ಸಾಹದಿಂದಲೂ ದೈನ್ಯದಿಂದಲೂ ನುಡಿದನು

''ಸೇವಕರೇ, ಇವರನ್ನು ಬಂಧಿಸಿರಿ!'' ರಾಜಕರ್ಮಚಾರಿಗಳ ಮುಖ್ಯನು ತನ್ನ ಅನುಚರರಿಗೆ ಆಜ್ಞಾಪಿಸಿದನು.

ಸೇವಕನು ಶ್ರೇಷ್ಠಿಯನ್ನು ಬಂಧಿಸತೊಡಗಿದನು. ಈ ಗದ್ದಲವನ್ನು ಕೇಳಿ ಲಲ್ಲನೂ ರಾಜಕುಮಾರಿಯೂ ಮಹಾರಾಣಿಯೂ ಹೊರಗೆ ಬಂದರು. ಕುಂದಳು ಎದುರಿಗೆ ನಡೆದ ಎಲ್ಲ ವ್ಯಾಪಾರಗಳನ್ನು ನೋಡುತ್ತಲಿದ್ದಳು ಎಲ್ಲರೂ ವಿಮೂಢಮನಸ್ಕರಾಗಿ ನಿಂತುಬಿಟ್ಟಿದ್ದರು. ರಾಜಪರಿಚಾರಕರು ಶ್ರೇಷ್ಠಿಯನ್ನು ಬಂಧಿಸಿ ಹಿಡಿದುಕೊಂಡು ಹೋದರು. ಕೂಡಲೆ ಕುಂದಳು ಮೂರ್ಛಿತಳಾಗಿ ಬಿದ್ದಳು!

ಪುರುಷವೇಷಧಾರಿಯಾದ ರಾಜಕುಮಾರಿ ಶಿಲಾದೇವಿಯು ಅವಸರದಿಂದ ಮುಂದೆಬಂದು ಕುಂದಳನ್ನು ಶೈತ್ಯೋಪಚಾರದಿಂದ ಎಚ್ಚರಗೊಳಿಸಿದಳು. ಅನಂತರದಲ್ಲಿ ಅವಳು ಲಲ್ಲನ ಬಳಿಗೆ ಹೋಗಿ:—''ಮಹಾನಾಯಕ, ಸದ್ಯದ ವಿಪನ್ನಾವಸ್ಥೆಯಲ್ಲಿ ಶ್ರೇಷ್ಠಿಗಳ ಹಾಗು ಅವರ ಪತ್ನಿಯವರಾದ ಕುಂದದೇವಿಯವರ ಶುಶ್ರೂಷೆ ಮಾಡಲಿಕ್ಕೆ ಬೇಕು.''

ರಾಜಕುಮಾರಿಯು ಕುಂದಳನ್ನು ಹಾಸುಗೆಯ ಮೇಲೆ ಮಲಗಿಸಿ, ಬೇರೆ ಕಡೆಗೆ ಹೋಗಿ ಲಲ್ಲನ ಕಿವಿಯಲ್ಲಿ ಏನನ್ನೋ ಹೇಳಿದಳು. ರಾಜಕುಮಾರಿಯು ಹೇಳಿದ ಸಂಗತಿಯನ್ನು ಕೇಳಿ ಲಲ್ಲನು ವಿಸ್ಮಿತನೂ ಭಯಕಾತರವುಳ್ಳವನೂ ಆದನು. ಆಗ ಅವನು ಗಾಬರಿಗೊಂಡು:—''ಈ ಸಾಹಸವು ಅತ್ಯಂತ ಭಯಾನಕವಿರುವದು.''

''ಬೇಕಾದ ಹಾಗೆ ಇರಲೊಲ್ಲದೇಕೆ. ವಿಪನ್ನಾವಸ್ಥೆಯಲ್ಲಿದ್ದ ಜನರಿಗೆ ಕೈಲಾದಷ್ಟು ಸಹಾಯ ಮಾಡದಿರುವದು ಪರಮಾತ್ಮನ ಸತ್ಯಸೃಷ್ಟಿಯಲ್ಲಿ ಅಪರಾಧವೆನಿಸುವದು.''

"ರಾಜಕುಮಾರಿಯವರೆ, ಅನುಚಿತ ಕಾರ್ಯ ಮಾಡಲಾಗದು."

"ಮಹಾನಾಯಕ, ನಾನು ಅನುಚಿತ ಕಾರ್ಯವನ್ನು ಮಾಡಲುದ್ಯುಕ್ತಳಾಗಿಲ್ಲ. ಆಪನ್ನ ಜನರಿಗೆ ಸಹಾಯ ಮಾಡುವದು ಅನುಚಿತ ಕಾರ್ಯವೆನಿಸುವದೇ?"

"ಕುಮಾರಿ, ನಿಮ್ಮ ಅಭಿಪ್ರಾಯವು ತಿಳಿಯಿತು. ರಾಜಮಾತೆಯವರು ನಿಮ್ಮ ಮಾತುಗಳಿಗೆ ಎಂದೂ ಸಮ್ಮತಿಸುವದಿಲ್ಲ"

"ದುಃಖಿತರ ದುಃಖಗಳನ್ನು ದೂರ ಮಾಡುವದು ನನ್ನ ಕರ್ತವ್ಯವಲ್ಲವೆ? ನಾವು ಯಾರೆಂಬದನ್ನು ಮಾತೆಯವರು ಮರೆತಿರಲಿಕ್ಕಿಲ್ಲ. ನಾವು ನಮ್ಮ ಕರ್ತವ್ಯವನ್ನು ಪಾಲಿಸಲಿಕ್ಕೇಬೇಕು. ದೀನ ಜನರನ್ನು ಎಂದೂ ಉಪೇಕ್ಷಿಸಬಾರದು."

"ರಾಜಕುಮಾರಿಯವರೆ, ನೀವು ದುಸ್ಸಾಹಸ ಮಾಡಬೇಕೆನ್ನುವಿರಿ."

"ನಾನು ಈ ದುಸ್ಸಾಹಸ ಮಾಡುವದನ್ನು ನಿರ್ಧರಿಸಿರುವೆನು. ಇದರ ಹೊರತು ಶ್ರೇಷ್ಠಿವರರ ಮುಕ್ತತೆಗೆ ಅನ್ಯ ಸಾಧನವಿಲ್ಲ. ಅವರನ್ನು ರಾಜಪರಿಚಾರಕರು ಬಂಧಿಸುತ್ತಿರುವಾಗಲೆ, ಬಂಧಮುಕ್ತರನ್ನು ಮಾಡುವ ಹಂಚಿಕೆಯು ನನಗೆ ತೋಚಿರುವದು. ನಾನು ಸರ್ವಸ್ವವನ್ನು ತ್ಯಜಿಸಿಯಾದರೂ ಅವರ ಬಿಡುಗಡೆ ಮಾಡಿಸುವೆನು."

ಮಹಾನಾಯಕನು ದುಃಖಿತ ಹೃದಯನಾಗಿ ಯೋಚಿಸುತ್ತ ಕುಳಿತನು.

---

೪

ಶ್ರೇಷ್ಠಿವರನನ್ನು ರಾಜಕರ್ಮಚಾರಿಗಳು ಸೆರೆಹಿಡಿದೊಯ್ದ ಘಟನೆಯಿಂದ ಮಹಾರಾಣಿಯು ಉದ್ವಿಗ್ನಮನಸ್ಕಳಾಗಿದ್ದಳು. ಅವನ ಬಿಡುಗಡೆಗೆ ಯಾವ ಉಪಾಯವನ್ನು ಯೋಜಿಸಬೇಕೆಂದು ಅವಳು ಬಹು ಪರಿಯಾಗಿ ಯೋಚಿಸಿದಳು. ಆಗ ಅವಳು ಮಹಾನಾಯಕನನ್ನು ಕುರಿತು:— "ಉಪಗುಪ್ತರನ್ನು ಮುಕ್ತಗೊಳಿಸಲಿಕ್ಕೆ ಯಾವ ಉಪಾಯವನ್ನು ಯೋಚಿಸಬೇಕು? ಆತ್ಮಸಮರ್ಪಣೆ ಮಾಡಿಯಾದರೂ ಅವರ ಬಿಡುಗಡೆ ಮಾಡಬೇಕೆಂದು ನನ್ನ ಮನಸ್ಸಿನಲ್ಲಿ ಹುಟ್ಟಿದೆ. ಮಹಾನಾಯಕರೇ, ಶ್ರೇಷ್ಠಿಯವರ ಮುಕ್ತತೆಗಾಗಿ ಯಾವ ಹಂಚಿಕೆ ತೆಗೆಯುವೀ?"

ರಾಜಕುಮಾರಿಯಾದ ಶಿಲಾದೇವಿಯು ತಾಯಿಯ ಬಳಿಗೆ ಬಂದು ಆತುರತೆಯಿಂದ:-"ಮಾತೆ, ಶ್ರೇಷ್ಠಿಯವರನ್ನು ನಾನು ಬಂಧಮುಕ್ತರನ್ನಾಗಿ ಮಾಡಿಸುವೆನು"

'ಕುಮಾರಿ, ನೀನು ಏನು ಮಾಡುವೆ? ಬಾಲಿಕೆಯಾದ ನಿನ್ನಿಂದ ಈ ದೊಡ್ಡ ಕೆಲಸವು ಹೇಗೆ ಕೈಗೂಡೀತು?''

"ನನ್ನ ಅಣ್ಣಂದಿರಾದ ಜಿತೇಂದ್ರರ ರೂಪವು ನನ್ನಂತೆಯೆ ಇರುವದಲ್ಲವೆ ಮಹಾನಾಯಕರೇ?"

"ಸಹಜವು." ಎಂದು ಮಹಾನಾಯಕ ಲಲ್ಲನು ಉತ್ತರವಿತ್ತನು.

''ಪುರುಷವೇಷದಿಂದಿರತೊಡಗಿದ ನಾನು ಅಣ್ಣಂದಿರಂತೆಯೇ ಕಾಣುವೆ ನಲ್ಲವೆ? ಯುವರಾಜ ಜಿತೇಂದ್ರ ಮಹಾರಾಜರಂತೆಯೆ ಕಾಣುತ್ತಿರ ವಿರೆಂದು ನೀವು ನನಗೆ ಎಷ್ಟೋ ಸಾರೆ ಅಂದಿರುವಿರಲ್ಲವೆ?''

"ಹೌದು. ಮುಂದೇನು?"

' ನನ್ನ ಅಣ್ಣಂದಿರನ್ನು ಹಿಡಿದುಕೊಟ್ಟವರಿಗೆ ಪುರಸ್ಕಾರವು ಹತ್ತು ಸಾವಿರ ಸುವರ್ಣಮುದ್ರೆಯುಂಟು. ಇಷ್ಟೇ ಧನವು ಶ್ರೇಷ್ಠಿವರರ ಮುಕ್ತತೆಗಾಗಿ ಬೇಕಾಗಿರುವದು ನೀವು ನನ್ನನ್ನು ಹಿಡಿದೊಯ್ದು ನಗರ ಪಾಲರ ವಶಕ್ಕೆ ಕೊಡಿರಿ ಅವರಿಂದ ದೊರೆತ ಪಾರಿತೋಷಕದ ಸಹಾಯ ದಿಂದ ಶ್ರೇಷ್ಠಿವರರನ್ನು ಬಿಡುಗಡೆ ಮಾಡಿರಿ'' ಎಂದು ಶೀಲಾದೇವಿಯು ಹಸನ್ಮುಖಿಯಾಗಿ ನುಡಿದು, ತಾಯಿಯನ್ನು ಕುರಿತು:—''ಮಾತೆ, ನನ್ನ ಹಂಚಿಕಯು ಸರಿಯಾದದ್ದಿರುವದಷ್ಟೆ? ಪ್ರಾಣಕೊಟ್ಟಾದರೂ ವಿಪನ್ನಾವಸ್ಥೆ ಯಲ್ಲಿದ್ದ ಶ್ರೇಷ್ಠಿಗಳನ್ನು ಬಿಡಿಸಿಕೊಳ್ಳಬೇಕೆಂದು ನಿಮ್ಮ ಅಭಿಪ್ರಾಯವುಂಟು. ನಾನು ಆತ್ಮಸಮರ್ಪಣೆ ಮಾಡಲಿಕ್ಕೆ ಸ್ವಸಂತೋಷದಿಂದ ಸಿದ್ಧಳಾಗಿರುವೆನು. ಪರೋಪಕಾರಕ್ಕಾಗಿ ಈ ದೇಹವು ಉಪಯೋಗವಾಗುವ ಪ್ರಸಂಗವೊದಗಿದ್ದ ಕ್ಕಾಗಿ ನನಗೆ ಆನಂದವಾಗಿದೆ. ನೀವಾದರೂ ಆನಂದದಿಂದ ನನಗೆ ಅನುಜ್ಞೆ ಕೊಡಿರಿ.''

ರಾಣಿಗೆ ವಜ್ರಾಘಾತವಾದಂತೆ ವೇದನೆಯಾಗತೊಡಗಿತು. ಆಗ ಅವಳು ಕ್ಲೇಶದಿಂದ:—''ಕುಮಾರಿ, ನೀನು ಇದೇನು ಮಾತನಾಡತೊಡಗಿರುವೆ?"

''ಅದೇಕೆ ಮಾತೆ?''

''ಇದು ನಿನ್ನ ಹುಚ್ಚುತನವು.''

''ಹುಚ್ಚುತನವಲ್ಲ; ಜಾಣತನವು. ನಾನು ಎಲ್ಲ ಬಗೆಯಿಂದ ವಿಚಾರಿಸಿ ಯೆ ನಿಮ್ಮೆದುರಿನಲ್ಲಿ ನನ್ನ ಮನೋದಯವನ್ನು ತಿಳಿಸಿರುವೆನು.''

''ಏನು ವಿಚಾರ ಮಾಡಿರುವೆ?''

"ನನ್ನ ಹಂಚಿಕೆಯಿಂದ ಎರಡು ಕಾರ್ಯಗಳು ಸಾಧಿಸುವವು. ಶ್ರೇಷ್ಠಿ ವರರ ಮುಕ್ತತೆಯಾಗುವದು ಮೊದಲನೆಯ ಕಾರ್ಯವು; ನಾನೇ ಯುವ

ರಾಜನೆಂದು ಚಂಡಾಶೋಕನ ಶಿಳುವಳಿಕೆಯಾಗುವದರಿಂದ ಮುಂದೆ ಅಣ್ಣಂದಿರ ಜೀವಿತವು ಸುರಕ್ಷಿತವಾಗುವದು."

"ಬರ್ಬರ ಸೈನಿಕರು ನಿರ್ದಯತೆಯಿಂದ ನಿನ್ನನ್ನು ಹಿಂಸಿಸುವರು; ಚಂಡಾಶೋಕನು ಕಡು ಹಗೆತನಾವ ನಿನಗೆ ಪರಿಪರಿಯ ಯಾತನೆಗಳನ್ನನುಭವಿಸ ಹಚ್ಚುವನು. ನೀನು ಇವೆಲ್ಲ ಸಂಗತಿಗಳ ಬಗ್ಗೆ ಯೋಚಿಸಿದೆ ಯೇನು?"

"ಚಕ್ರವರ್ತಿಯು ನನ್ನನ್ನು ವಧಿಸುವನೆಂದು ನೀವು ತಿಳಿದಿಲ್ಲವೆ? ಅವನು ನನ್ನನ್ನು ಹಿಡಿದು, ಈ ದೇಹಕ್ಕೆ ಯಾತನೆ ಕೊಡಬಹುದು ಜೀವಿತದ ವಧೆಗೊಳಿಸಲಿಕ್ಕೆ ಅವನು ಸಮರ್ಥನಿರುವದಿಲ್ಲವಷ್ಟೆ? ನಾನು ಚಕ್ರವರ್ತಿಗೆ ಚನ್ನಾಗಿ ಬುದ್ಧಿಗಲಿಸಿ, ಅವನನ್ನು ಸನ್ಮಾರ್ಗಕ್ಕೆ ಹಚ್ಚಬೇಕೆಂದು ನಿರ್ಧರಿಸಿರುವೆನು."

"ಶೀಲಾ, ನಾನು ನಿನ್ನನ್ನು ಈ ದುಸ್ಸಾಹಸಕ್ಕೆ ಹಚ್ಚಲಾರೆನು. ನಡೆ, ಇಲ್ಲಿಂದ ಹೊರಡೋಣ. ನಮ್ಮ ಸಂಗಡಿಗರಾದ ಯಾತ್ರಿಕರು ಮುಂದೆ ಹೋಗಿರುವರು. ಅವರನ್ನು ಕೂಡಿ ಸುರಕ್ಷಿತವಾದ ಸ್ಥಳಕ್ಕೆ ಹೋಗೋಣ."

ಶೀಲಾದೇವಿಯು ಕಣ್ಣೀರು ದುರಿಸುತ್ತ ಖಿನ್ನವಾಣಿಯಿಂದ:—"ಕಲಿಂಗ ರಾಜರ ಪಟ್ಟನುಹಿಸಿರುವರಾದ ನೀವು ಇಷ್ಟು ಸ್ವಾರ್ಥಿಗಳಾದದ್ದು ಹೇಗೆ! ಉದಾರತೆಯನ್ನು ತೋರಿಸಿ, ಆಶ್ರಯಕೊಡಬೇಕೆಂದು ಸಾಹಸಮಾಡುತ್ತಿದ್ದ ಶ್ರೇಷ್ಠಿವರರನ್ನು ವಿಪನ್ನಾವಸ್ಥೆಯಲ್ಲಿಯೆ ಬಿಟ್ಟು ಹೋಗುವದು ನಿಮ್ಮ ಸದಸದ್ವಿವೇಕ ಬುದ್ಧಿಗೆ ಯೋಗ್ಯವೆನಿಸುವದೆ?"

ಇಷ್ಟು ವೇಳೆಯವರೆಗೆ ತಟಸ್ಥನಾಗಿ ಕುಳಿತ ಮಹಾನಾಯಕನು ರಾಣಿಯನ್ನು ಕರೆತು ವಿನಯದಿಂದ:—'ಮಹಾರಾಜ್ಞಿಯವರೇ, ಕುಮಾರಿ ಶೀಲಾದೇವಿಯವರ ತ್ಯಾಗವು ಪ್ರಶಂಸನೀಯವೂ ಅವರ ವಂಶಕ್ಕೆ ಭೂಷಣಾಸ್ಪದವೂ ಆಗಿರುವದು. ವಿಶಿಷ್ಟ ವೇಳೆಯಲ್ಲಿ ವಿಶಿಷ್ಟ ಮಹನೀಯರು ತಮ್ಮ ಪ್ರತಾಪವನ್ನೂ ಸ್ವಾರ್ಥತ್ಯಾಗವನ್ನೂ ವ್ಯಕ್ತಗೊಳಿಸಿ ಚಿರಕೀರ್ತಿಯುತರಾಗಿರುವರು. ಅವರ ಅಭಿಪ್ರಾಯದಂತೆ ಶ್ರೇಷ್ಠಿವರರನ್ನು ಬಿಡಿಸುವದೇ ಯೋಗ್ಯವು. ಶೀಲಾದೇವಯವರು ತಮ್ಮ ಬುದ್ಧಿಕೌಶಲ್ಯದಿಂದ ಸುದಿನಗಳನ್ನು ಕಾಣಬಹುದು."

"ಮಹಾನಾಯಕರೇ, ಇದರ ಹೊರತು ಬೇರೆ ಉಪಾಯಗಳಿಲ್ಲವೆ?" ಮಹಾರಾಣಿಯು ಕುಂಠಿತ ಸ್ವರದಿಂದ ಮಾತಾಡಿದಳು.

"ಇಲ್ಲ; ಬೇರೆ ಉಪಾಯಗಳಾವವೂ ಇಲ್ಲ"

ರಾಜಪುತ್ರಿಯು ಗಹನವಿಚಾರದಲ್ಲಿ ಮುಳುಗಿದಳು. ಅವಳ ಮನಸ್ಸು ಚಿಂತೆಯಿಂದ ವ್ಯಗ್ರವಾಯಿತು. ಆಗ ಶೀಲಾದೇವಿಯು:—“ಮಾತೇ, ನಾನು ಕಲಿಂಗರಾಜಕುಮಾರಿಯರ ಹೆನು ಶಸ್ತ್ರವಿದ್ಯೆಯಲ್ಲಿಯೂ ಅಶ್ವಾರೋಹಣದಲ್ಲಿಯೂ ನಾನು ಕುಶಲಳಾದೆನು. ನನ್ನ ತಂದೆಯವರು ನನಗೆ ಕ್ಷಾತ್ರವೀರೋಚಿತವಾದ ವಿದ್ಯೆಯನ್ನು ಕಲಿಸಿರುವದಲ್ಲದೆ, ಕ್ಷತ್ರಿಯ ಕುಮಾರಿಯೆಂಬ ಅಭಿದಾನಕ್ಕೆ ತಕ್ಕವಳಾಗಿರುವಂತಹ ಶಿಕ್ಷಣವನ್ನೂ ಕೊಟ್ಟಿರುವರು. ನಾನು ಯಾರಿಗೂ ಸೊಪ್ಪು ಹಾಕುವದಿಲ್ಲ. ನಾನು ಸಮ್ರಾಟನೆದುರಿಗೆ ಹೋಗಿ, ಅವನ ಪಾತಕಗಳನ್ನೂ ಅತ್ಯಾಚಾರಗಳನ್ನೂ ಬೈಲಿಗೆಳೆದು, ಅವನಿಗೆ ಚನ್ನಾಗಿ ಬುದ್ಧಿ ಕಲಿಸುವೆನು. ಇದರಿಂದ ನಮ್ಮ ಮನೆತನದ ಕಲ್ಯಾಣವಾದರೂ ಆಗಬಹುದು.”

ರಾಣಿಯು ಮುಖದಿಂದ ಮಾತುಗಳೇ ಹೊರಡಲಿಲ್ಲ. ಅವಳು ಶಿರವನ್ನಲ್ಲಾಡಿಸಿ ಮಗಳ ಅಭಿಪ್ರಾಯಕ್ಕೆ ಅನುಮೋದನವಿತ್ತಳು. ಆಗ ಶೀಲಾದೇವಿಯು ಮಹಾನಾಯಕನನ್ನು ಕುರಿತು:—“ನೀವು ಈಗಲೆ ಕುಂದ ದೇವಿಯು ಬಳಿಗೆ ಹೋಗಿರಿ. ನಿಮ್ಮ ಮನೆಯಲ್ಲಿ ಕಲಿಂಗ ರಾಜಕುಮಾರನು ಗುಪ್ತವಾಗಿರುವನೆಂದೂ, ಈ ಸುದ್ದಿಯನ್ನು ಓಲಗಕ್ಕೆ ತಿಳಿಸಿ, ಪಾರಿತೋಷಕ ಕೊಂಡು ಪತಿಯು ಬಂಧವಿಮೋಚನೆ ಮಾಡಿಸಿಕೊಳ್ಳಬೇಕೆಂದೂ ಅವಳಿಗೆ ಹೇಳಿರಿ.”

“ರಾಜಕುಮಾರಿಯವರೆ, ನೀವೇ ಈ ಸಾಹಸ ಮಾಡಿರಿ.”

“ನೀವೇ ಅವಳಿಗೆ ಹೇಳಿರಿ ನನಗಿಂತ ನೀವು ಹೇಳುವದರಿಂದಲೇ ಹೆಚ್ಚಿನ ಮಹತ್ವವು ಪ್ರಾಪ್ತವಾಗುವದು”

ಮಹಾನಾಯಕನು ಶ್ರೇಷ್ಠಿವಧುವಾದ ಕುಂದೆಯ ಬಳಿಗೆ ಹೋದನು

---

೫

ರಾಜಕುಮಾರಿ ಶೀಲಾದೇವಿಯ ಹೇಳಿಕೆಯ ಮೇರೆಗೆ ಮಹಾನಾಯಕನು ಕುಂದಳ ಬಳಿಗೆ ಹೋಗಿ:—“ದೇವಿ, ಕಲಿಂಗರಾಜಕುಮಾರನು ನಿಮ್ಮ ಮನೆಯಲ್ಲಿರುವನು. ನೀವು ಈ ಸುದ್ದಿಯನ್ನು ಓಲಗಕ್ಕೆ ತಿಳಿಸಿ ಶ್ರೇಷ್ಠಿಗಳನ್ನು ಬಿಡಿಸಿರಿ”

ಮಹಾನಾಯಕನ ಪ್ರಸ್ತಾಪವನ್ನು ಕೇಳಿ ಕುಂದಳು ಆಶ್ಚರ್ಯ-ಖೇದಗಳಿಂದ—“ಏನು, ಕಲಿಂಗರಾಜಕುಮಾರರು ನನ್ನ ಮನೆಯಲ್ಲಿರುವರೆ?”

“ಹೌದು. ನಿಮ್ಮ ಮನೆಯಲ್ಲಿ ಅತಿಥಿಗಳಾಗಿ ಬಂದವರಲ್ಲಿಯ ಬಾಲಕನೇ

ಯುವರಾಜ ಜಿತೇಂದ್ರಮಹಾರಾಜನು. ಅವನ ಶಿರಸ್ಸಿನ ಬೆಲೆಯು ಹತ್ತು ಸಾವಿರ ಸುವರ್ಣ ಮುದ್ರೆಗಳಾಗಿರುವದು. ನೀವು ಆ ಪಾರಿತೋಷಕದ ಧನದಿಂದ ನಿಮ್ಮ ಪತಿಗಳನ್ನು ಬಿಡಿಸಿಕೊಳ್ಳಿರಿ."

"ನಾನು ರಾಜಕುಮಾರರನ್ನು ಹಿಡಿದುಕೊಡಲಾ? ಮನೆಗೆ ಬಂದ ಅತಿಥಿಗಳು ನನ್ನ ಪತಿಗೆ ಪೂಜ್ಯರಿರದಿದ್ದರೂ, ಅವರ ಸ್ತ್ರೀಯು ಪಿತೃಗ ಪೂಜ್ಯರಿರುವರು. ವೃದ್ಧಮಹೋದಯರೆ, ತಾವು ಈ ಬಗೆಯ ನೀಚವೃತ್ತಿಯಿಂದ ನಡೆಯಲಿಕ್ಕೆ ನನಗೆ ಹೇಳಬೇಡಿರಿ. ನೀವು ನಮ್ಮ ಸ್ವಾಮಿಯ ಘಾತಮಾಡಲುದ್ಯುಕ್ತರಾಗಿರುವಿರಲ್ಲವೆ?"

"ಶ್ರೇಷ್ಠಿವಧು! ನೀವು ನನ್ನ ಮೇಲೆ ದೋಷಾರೋಪಣೆ ಮಾಡಬೇಡಿರಿ. ರಾಜಕುಮಾರನು ಸ್ವೇಚ್ಛೆಯಿಂದ ಹೇಳಿದ ಮಾತುಗಳನ್ನೇ ನಾನು ನಿಮಗೆ ತಿಳಿಸಿರುವೆನು."

"ರಾಜಕುಮಾರರು ತಾವಾಗಿ ಪ್ರಾಣತ್ಯಾಗ ಮಾಡಲಿಕ್ಕೆ ಸಿದ್ಧರಾಗಿರುವರೆ?" ಕುಂದಳು ವಿಸ್ಮಯ ವಿಮೂಢಳಾಗಿ ಮಹಾನಾಯಕನನ್ನು ಕೇಳಿದಳು.

"ನಿಜವಿರುವದು."

"ರಾಜಕುಮಾರರ ಉದಾರತೆಯೂ ನಿಸ್ವಾರ್ಥಬುದ್ಧಿಯೂ ಅವರ್ಣನೀಯವಾದವುಗಳಿರುವವು. ಸದ್ಗುಣಸಂಪನ್ನರಾದ ಅವರು ಧನ್ಯರು! ಪರಮ ಧನ್ಯರು!! ಅವರ ಪಾದಗಳಿಗೆ ಅನಂತ ಪ್ರಣಾಮಗಳಿರಲಿ. ಮಹಾಶಯರೆ, ನನ್ನಿಂದ ಅಧರ್ಮಾಚರಣೆಯು ಘಟಿಸಲಾರದು. ಪವಿತ್ರರಾದ ಅತಿಥಿಗಳ ವಿಶ್ವಾಸಘಾತಮಾಡಲಿಕ್ಕೆ ನಾನು ಕಾಲತ್ರಯದಲ್ಲಿಯೂ ಒಪ್ಪಲಾರೆನು."

"ದೇವಿ, ಇದರಲ್ಲಿ ವಿಶ್ವಾಸಘಾತವೇನು?"

"ನೀವು ಹೇಗೆ ತಿಳಿದುಕೊಂಡರೂ ನನ್ನಿಂದ ಈ ಕಾರ್ಯವಾಗಲಾರದು."

ಕುಂದಳು ಮಹಾನಾಯಕನ ಮಾತಿಗೆ ಒಪ್ಪದೆ ತನ್ನದೇ ಹಟವನ್ನು ಹಿಡಿದದ್ದರಿಂದ ಹೇಗಾದರೂ ಮಾಡಿ ಅವಳ ಮನಸ್ಸು ತಿರುಗಿಸಬೇಕೆಂದು ಪುರುಷವೇಷಧಾರಿಯಾದ ಶೀಲಾದೇವಿಯು ಅವಳ ಬಳಿಗೆ ಬಂದಳು. ಆಗ ಅವಳು ಕುಂದಳನ್ನು ಕುರಿತು:—"ದೇವಿ, ನಾನು ಅನಿವಾರ್ಯಹಕ್ಕಾಗಿ ನಿಮ್ಮ ಭೆಟ್ಟಿಯಾಗಬೇಕಾಯಿತು. ನೀವು ಪತಿಪ್ರಾಣಾ ಸಾಧ್ವಿಮಣಿಗಳು; ಪರಮ ಧರ್ಮಾತ್ಮರು. ನಿಮ್ಮ ಸೌಭಾಗ್ಯವು ಅಚಲವಾಗಿರಲಿ. ಶ್ರೇಷ್ಠಿವರರಾದರೂ ಮಹಾಪುರುಷರಿರುವರು. ನೀವಿಬ್ಬರು ದಂಪತಿಗಳು ಪರಮಪೂಜನೀಯರಿರುವಿರಿ. ಸದ್ಗುಣಮಂಡಿತರಾದ ನಿಮ್ಮನ್ನು ನೋಡಿ ನನ್ನ ಮನಸ್ಸು ಪ್ರಸನ್ನವಾಗಿರುವದು. ಅಂತೆಯೇ ಆತ್ಮತ್ಯಾಗಮಾಡಲಿಕ್ಕೆ ಸಿದ್ಧನಾಗಿರುವೆನು."

ಕುಂದಳು ಅಶ್ರುಪೂರ್ಣನಯನೆಯಾದಳು. ಆಗ ಅವಳು ಗದ್ಗದ ಕಂಠದಿಂದ:—"ರಾಜಕುಮಾರರೆ, ನಿಮ್ಮ ಮುಖದಿಂದ ಈ ಬಗೆಯ ಅಧರ್ಮದ ಮಾತುಗಳು ಹೊರಡಬಾರದು"

"ದೇವಿ. ಅಧರ್ಮವಲ್ಲ. ನಾನು ನಿಮಗೆ ಅಧರ್ಮದ ಮಾತುಗಳನ್ನು ಹೇಳಿಲ್ಲ. ನಾನು ಸಮ್ರಾಟ ಚಂಡಾಶೋಕನ ಬಳಿಗೆ ಹೋಗಬೇಕಾಗಿರುವದು. ಅದರ ಅನುಷಂಗಿಕವಾಗಿ ನೀವು ಲಾಭಮಾಡಿಕೊಳ್ಳಲಿಕ್ಕೆ ಅಡ್ಡಿಯೇನು?"

"ನನ್ನಿಂದ ಇಂತಹ ಕುಕೃತ್ಯವನ್ನು ಮಾಡುವದಾಗದು."

"ಹಾಗಾದರೆ ಶ್ರೇಷ್ಠಿವರರ ಮುಕ್ತತೆಯು ಹೇಗಾಗಬೇಕು"

"ಪ್ರಭುವಿನ ಇಚ್ಛೆಯು ಹೇಗಿರುವದೋ ಹಾಗಾಗಲಿ."

"ದೇವಿ, ಪ್ರಭುವಿನ ಇಚ್ಛೆಯಿಂದಲೆ ಈ ಸಂಯೋಗವು ಘಟಿಸಿರುವದು. ಈ ಸಂಧಿಯನ್ನು ನೀವು ವ್ಯರ್ಥವಾಗಿ ಹೋಗಗೊಡಬೇಡಿರಿ."

"ರಾಜಕುಮಾರರೆ, ಸ್ವಾರ್ಥಕ್ಕಾಗಿ ಅನ್ಯರನ್ನು, ಅದರಲ್ಲೂ ಪರಮಪೂಜನೀಯ ಅತಿಥಿಗಳನ್ನು ನಾಶಗೊಳಿಸಲಿಕ್ಕೆ ನಾನು ಮನಸ್ಸುಮಾಡಲಾ? ಅತಿಥಿಘಾತಮಾಡಿದ ಪಾತಕವು ಎಷ್ಟು ಜನ್ಮಗಳಲ್ಲಿ ತೀರೀತು? ನನ್ನಿಂದ ಈ ಕಾರ್ಯವು ಎಂದೂ ಆಗುವದಿಲ್ಲ."

ಕುಂದಳ ಚಂಡಿತನವನ್ನು ನೋಡಿ ಶೀಲಾದೇವಿಯು ಕ್ಲೇಶಗೊಂಡಳು. ಇಂತಹ ವಿಪನ್ನಾವಸ್ಥೆಯಲ್ಲಿ ಸಹ ಕುಂದಳು ತನ್ನ ಶೀಲವನ್ನು ಬಿಡದ್ದನ್ನು ನೋಡಿ, ಅವಳನ್ನು ಶೀಲಾದೇವಿಯು ಮನದಲ್ಲಿ ಮನಸ್ವೀಯಾಗಿ ಕೊಂಡಾಡಿದಳು. ಅನಂತರದಲ್ಲಿ ಅವಳು ನಿಶ್ಚಯಾತ್ಮಕ ಸ್ವರದಿಂದ:—"ದೇವಿ, ನೀವು ಒಪ್ಪದಿದ್ದರೂ ನಾನು ಈ ಕಾರ್ಯವನ್ನು ಈಡೇರಿಸತಕ್ಕವಳೇ!"

"ರಾಜಕುಮಾರರೆ, ನನ್ನನ್ನು ಅಧಮಳನ್ನಾಗಿ ಮಾಡಬೇಡಿರಿ ನನ್ನ ಸೆರಗಿಗೆ ಪಾಪದ ಗಂಟು ಕಟ್ಟಬೇಡಿರಿ"

"ನಿಮ್ಮ ತಿಳುವಳಿಕೆಯು ತಪ್ಪಾದದ್ದಿರುವದು. ನಾನು ಹೇಳಿದ ಉಪಾಯವು ಪಾಪಪೂರಿತವಲ್ಲ; ಧರ್ಮಪೂರಿತವಿರುವದು. ನಾನು ಶ್ರೇಷ್ಠಿವರರನ್ನು ಮುಕ್ತಗೊಳಿಸಿದರೆ ಅವರು ನನ್ನ ಮುಕ್ತತೆಗಾಗಿ ಸಾಹಸ ಮಾಡುವರು. ಅವರಿಂದ ನನ್ನನ್ನು ಬಿಡುಗಡೆ ಮಾಡುವದಾಗದಿದ್ದರೂ, ನಾನು ನನ್ನ ಬುದ್ಧಿಕೌಶಲ್ಯದಿಂದ ಪಾರಾಗುವೆನು ನಮ್ಮಿಂದ ಶ್ರೇಷ್ಠಿಗಳನ್ನು ಬಿಡುಗಡೆ ಮಾಡುವದು ಸಾಧ್ಯವಿದ್ದರೂ ಕಣ್ಣು ಮುಚ್ಚಿಕೊಂಡು ಕುಳಿತರೆ, ನಮಗೆ ಅಧಮರೆಂಬ ಹೆಸರು ಪ್ರಾಪ್ತವಾಗುವದು. ಶ್ರೇಷ್ಠಿಗಳು ಕಾರಾಗೃಹದಲ್ಲಿ ಅನೇಕ ವಿಧದ ಯಾತನೆಗಳನ್ನನುಭವಿಸುತ್ತ ಆಯುಷ್ಯಹಾನಿ-ಪ್ರಾಣಹಾನಿ

ಮಾಡಿಕೊಳ್ಳುವದು ನಿಮಗೆ ಸರಿದೋರುವದೆ?"

ಕುಂದಳು ದಿಙ್ಮೂಢಳಾಗಿ ರಾಜಕುಮಾರವೇಷಧಾರಿಯಾದ ಶೀಲೆಯ ಮುಖವನ್ನು ಎವೆಯಿಕ್ಕದೆ ನೋಡತೊಡಗಿದಳು. ಆಗ ಶೀಲಾದೇವಿಯು ಲಲ್ಲನನ್ನು ಕುರಿತು:—"ಮಹಾನಾಯಕರೆ, ನೀವು ಈಗಲೆ ರಾಜದ್ವಾರಕ್ಕೆ ಹೋಗಿ, ಇಲ್ಲಿ ನಾನಿರುವ ಸಂಗತಿಯನ್ನು ನಗರಾಧ್ಯಕ್ಷನಿಗೆ ತಿಳಿಸಿ ಅವರನ್ನು ಕರೆತನ್ನಿರಿ."

ಲಲ್ಲನು ಹೊರಟು ಹೋದನು. ಕುಂದದೇವಿಯ ಕೋಮಲವಾದ ಅಂತಃಕರಣಕ್ಕೆ ಬರೆಕೊಟ್ಟಂತಾಯಿತು. ಮುಂದೆ ಸ್ವಲ್ಪ ವೇಳೆಯಲ್ಲಿ ನಗರಾಧ್ಯಕ್ಷನು ರಾಜಪರಿಚಾರಕರನ್ನೊಡಗೊಂಡು ಬಂದು, ಕುಂದಳಿಗೆ ಹತ್ತು ಸಾವಿರ ಸುವರ್ಣ ಮುದ್ರೆಗಳನ್ನಿತ್ತು, ಪುರುಷವೇಷಧಾರಿಯಾದ ಕುಮಾರಿ ಶೀಲಾದೇವಿಯನ್ನು ಸೆರೆಹಿಡಿದೊಯ್ದನು.

ಈ ಭಯಾನಕ ದೃಶ್ಯವನ್ನು ನೋಡಿ ಕುಂದಳು ಪ್ರಲಾಪಿಸುತ್ತ ಭೂಮಿಗೆ ಬಿದ್ದಳು!

---

೬

"ಪ್ರಭುಶಕ್ತಿಯು ಅವರ್ಣನೀಯವಿರುವದು. ಪರಮಾತ್ಮನು ದಯಾಪರನಿದ್ದುದರಿಂದ ಸುದಿನವನ್ನು ಕಂಡೆನು. ಕುಂದ, ಅತಿಥಿಸತ್ಕಾರ ಪೂರೈಸಿತೆ? ನಾನು ಬಂಧವಿಮೋಚನೆಹೊಂದಿ ಬಂದಿರಲು ನಿನ್ನ ಮುಖವು ಮ್ಲಾನವಾದ ಕಾರಣವೇನು? ನೀನು ಹಸನ್ಮುಖಿಯಾಗಿ ನನ್ನ ಸ್ವಾಗತಮಾಡುವೆಯೆಂದು ನಾನು ನಂಬಿದ್ದೆನು; ಆದರೆ ನೀನು ದುಃಖಪೂರಿತ ಹೃದಯಿಯಿರುವೆಯೆಂಬದು ನಿನ್ನ ಮುಖಲಕ್ಷಣದಿಂದ ವ್ಯಕ್ತವಾಗುತ್ತದೆ. ಪ್ರಿಯ ಕುಂದ! ನಿನ್ನ ಮನಃಸ್ಥಿತಿಯು ಇಷ್ಟೇಕೆ ವಿಚಿತ್ರವಾಗಿರುವದು? ಅಯ್ಯೋ! ಅಳತೊಡಗಿದೆಯಲ್ಲ!"

ಪತಿಯ ಮಾತಿಗೆ ಉತ್ತರವೀಯಲಸಮರ್ಥಳಾದ ಕುಂದಳು ಪತಿಯ ಚರಣಗಳ ಮೇಲೆ ಬಿದ್ದು ರೋದಿಸಲಾರಂಭಿಸಿದಳು. ಉಪಗುಪ್ತನು ಈ ಆಕಲ್ಪಿತ ಘಟನೆಯಿಂದ ವಿಸ್ಮಿತನಾದನು. ಆಗ ಅವನು ಅಂತಃಕರಣಪೂರ್ವಕವಾಗಿ—"ಕುಂದ, ದುಃಖಿಸದಿರು. ನನ್ನನ್ನು ಬಂಧಮುಕ್ತಗೊಳಿಸಿದ ಕೃಪಾಳುವಾದ ಮಿತ್ರನಾರೆಂಬದನ್ನು ಹೇಳು. ನಾನು ಆ ಸನ್ಮಿತ್ರನ ಧನ್ಯವಾದನೆ ಮಾಡಿ, ಅವನ ಉಪಕಾರವನ್ನು ತೀರಿಸಲಿಕ್ಕೆ ಶಕ್ತಿಮೀರಿ ಯತ್ನಿಸುವೆನು."

ಕುಂದಳು ಪ್ರಲಾಪಿಸುತ್ತಲೇ ಎಲ್ಲ ಸಂಗತಿಗಳನ್ನು ನಿವೇದಿಸಿದಳು.

ಅವಳ ಮಾತುಗಳನ್ನು ಕೇಳಿ ಉಪಗುಪ್ತನ ಹೃದಯಕ್ಕೆ ಸಹಸ್ರ ಚೇಳುಗಳು ಕಡಿದಷ್ಟು ವೇದನೆಯಾಯಿತು. ಆಗ ಅವನು ವ್ಯಥಿತಾಂತಃಕರಣದಿಂದ:— "ಕುಂದ, ನೀನು ಇದೇನು ಹೇಳುವೆ? ರಾಜಕುಮಾರನನ್ನು ಹಿಡಿದುಕೊಟ್ಟು, ಆ ದುಷ್ಕೃತಿಯಿಂದ ಬಂದ ಧನದಿಂದ ನನ್ನ ಬಿಡುಗಡೆ ಮಾಡಿಸಿದೆಯಾ?"

ಕುಂದಳು ನಿರುತ್ತರಳಾಗಿದ್ದಳು

"ಕುಂದ! ಕುಂದ! ಈ ಮಹಾಪಾತಕವನ್ನು ನೀನು ಮಾಡಿದೆಯಾ? ನನ್ನ ಜನ್ಮವನ್ನೂ, ಆಯುಷ್ಯವನ್ನೂ, ಯಶಸ್ಸನ್ನೂ, ಧರ್ಮವನ್ನೂ ನೀನು ಹಾಳು ಮಾಡಿದೆಯಾ? ಕುಂದ! ನೀನು ಇಷ್ಟು ಸ್ವಾರ್ಥಪರಳೂ, ಅಧರ್ಮಿಯೂ ಹೇಗೆ ಆದೆ? ದೊಡ್ಡ ಅನರ್ಥವಾಯಿತು; ಅಧರ್ಮವಾಯಿತು! ಹಾಯ! ಹಾಯ !!"

ಇಷ್ಟರಲ್ಲಿ ಅನಾಹೂತನನ್ನು ನೋಡಿ ಮಹಾನಾಯಕ ಲಲ್ಲನು ಮರುಗಿದನು. ನಿರಪರಾಧಿಯಾದ ಕುಂದಳು ಪತಿಕ್ಷೋಭೆಗೆ ಗುರಿಯಾಗುವ ಪ್ರಸಂಗ ಪ್ರಾಪ್ತವಾಗಿತೆಂದು ಅವನು ಬಹಳವಾಗಿ ದುಃಖಿಸಿ, ಅಲ್ಲಿಗೆ ಪ್ರವೇಶಿಸಿ:—"ಶ್ರೇಷ್ಠಿವರರೇ ಕುಮಾರ ಜಿತೇಂದ್ರರು ಸ್ವೇಚ್ಛೆಯಿಂದ ಈ ಕಾರ್ಯ ಮಾಡಿರುವರು. ಕುಂದದೇವಿಯವರಲ್ಲಿ ತಿಲಾಂಶವಾದರೂ ಅಪರಾಧವಿಲ್ಲ. ಇವರು ಕೈಲಾದ ಮಟ್ಟಿಗೆ ರಾಜಕುಮಾರರನ್ನು ವಿರೋಧಿಸಿ, ಕೊನೆಗೆ ನಿರುಪಾಯರಾದರು. ನೀವು ಕುಂದದೇವಿಯವರ ಮೇಲೆ ದೋಷಾರೋಪಣ ಮಾಡಬೇಡಿರಿ"

ಉಪಗುಪ್ತನ ಹೃದಯವು ದುಃಖದಿಂದ ತುಂಬಿತು. ಕಣ್ಣುಗಳು ಸಜಲವಾದವು. ಆಗ ಅವನು ಗದ್ಗದ ಕಂಠದಿಂದ: "ಮಹಾನಾಯಕರೇ, ಮುಂದೆ ಹೇಗೆ ಮಾಡಬೇಕು? ನಾನು ಈ ಪಾತಕದಿಂದ ಹೇಗೆ ಮುಕ್ತನಾಗಲಿ? ಅಯ್ಯೋ! ಈ ಜೀವವನ್ನು ಕೊಟ್ಟಾದರೂ ರಾಜಕುಮಾರರ ಬಿಡುಗಡೆಯಾಗಬಹುದೆ? ಮಹಾನಾಯಕರೇ! ವಿವೇಕಶಾಲಿ ವೃದ್ಧರಾದ ನಿಮ್ಮಿಂದ ಇಂತಹ ಕುಕರ್ಮವು ಹೇಗೆ ಘಟಿಸಿತು? ಕುಂದ ಸ್ತ್ರೀಬುದ್ಧಿಯು ಜ್ಞಾನಿಗಳಾದ ಮಹಾನಾಯಕರ ಹೃದಯವನ್ನು ಕಲ್ಲು ಮಾಡಿತು. ಕುಲವಧುವಾದ ಕುಂದಳೇ! ಸ್ತ್ರೀಹೃದಯವು ಅತ್ಯಂತ ತುಚ್ಛವಿರುವದು ನನ್ನ ಸಹಧರ್ಮಚಾರಿಣಿಯಾದ ನೀನು ಇಷ್ಟು ಸ್ವಾರ್ಥಿಯೂ ಅಧರ್ಮಳೂ ಹೇಗಾದೆ? ನೀನು ನಿನ್ನ ಸೌಖ್ಯಕ್ಕಾಗಿ-ಪತಿಸ್ನೇಹಕ್ಕಾಗಿ ಪರಮಪವಿತ್ರರಾದ ಅತಿಥಿಗಳನ್ನು ಈ ಪರಿ...."

ಉಪಗುಪ್ತನು ಮಾತನಾಡುತ್ತಲೆ ಭೂಮಿಗೆ ಬಿದ್ದು ಮೂರ್ಛಿತನಾದನು! ಅವನು ಮುಂದೆ ಸ್ವಲ್ಪ ವೇಳೆಯ ಮೇಲೆ ಚೇತರಿಸಿಕೊಂಡು ಪತ್ನಿಯನ್ನು ತೀಕ್ಷ್ಣ ದೃಷ್ಟಿಯಿಂದ ನೋಡತೊಡಗಿದನು. ಆಗ ಮಹಾರಾಣಿ ಚಂದ್ರ

ಲೀಲಾದೇವಿಯು ಅಲ್ಲಿಗೆ ಬಂದು:--"ಶ್ರೇಷ್ಠಿಗಳೇ, ಸದ್ಯದ ಘಟನೆಯಿಂದ ನಮ್ಮೆಲ್ಲರಿಗೆ ದಃಖವಾಗಿಲ್ಲವೆಂದು ನೀವು ತಿಳಿಯುವಿರೇನು? ರಾಜಕುಮಾರ ನನ್ನು ನಗರಪಾಲಕನ ವಶಮಾಡಿದ ದೋಷಕ್ಕೆ ನಾವು ಯಾರೂ ಪಾತ್ರರಲ್ಲ. ಸಮ್ರಾಟ ಚಂಡಾಶೋಕನ ಭೆಟ್ಟಿಯಾಗಬೇಕಾಗಿರುವದೆಂದು ಹೇಳಿ, ಅವನು ಸ್ವಸಂತೋಷದಿಂದ ಸೆರೆಯಾಳಾದನು. ನೀವು ಕುಂದದೇವಿಯವರ ಮೇಲೆ ಸಂತಾಪಗೊಳ್ಳಬೇಡಿರಿ. ಅವರು ರಾಜಕುಮಾರನ ಮನಸ್ಸು ತಿರುಗಿಸಲಿಕ್ಕೆ ಬಹು ಪರಿಯಾಗಿ ಯತ್ನಿಸಿದರು ನಿಮ್ಮಂತೆಯೇ ನಿಮ್ಮ ಪತ್ನಿಯವರೂ ವಿನಯಶಾಲಿಗಳೂ ಧರ್ಮಾತ್ಮರೂ ಆಗಿರುವರು. ಮುಂದೆ ನಮ್ಮ ಕರ್ತವ್ಯ ವೇನಿರುವದೆಂಬದರ ಬಗ್ಗೆ ಉಪಾಯವನ್ನು ಹುಡುಕಬೇಕಲ್ಲದೆ, ಗತಗೋಷ್ಠಿ ಗಾಗಿ ಚಿಂತಾಕ್ರಾಂತರಾಗಬಾರದು."

"ಹೇಳಿರಿ, ಮಹಾರಾಜ್ಞಿಯವರೆ, ಹೇಳಿರಿ. ಯಾವ ಹಂಚಿಕೆಯಿಂದ ಕುಮಾರರ ಮುಕ್ತತೆಯಾಗಬಹುದೆಂಬದನ್ನು ಹೇಳಿರಿ"

ಅನಂತರದಲ್ಲಿ ಎಲ್ಲರೂ ಕೂಡಿ ವಿಚಾರವಿನಿಮಯ ಮಾಡಿದರು. ರಾಜ ಪರಿಚಾರಕರು ರಾಜಕುಮಾರನನ್ನು ರಾಜಧಾನಿಗೆ ಒಯ್ಯುವಾಗ ಅವನೊಡನೆ ತಾವು ಹೋಗಬೇಕೆಂದು ಮಹಾನಾಯಕ ಲಲ್ಲನೂ ಮಹಾರಾಜ್ಞಿಯೂ ನಿಶ್ಚ ಯಿಸಿಕೊಂಡರು. ಅಲ್ಲಿ ಹೋದ ಮೇಲೆ ಪ್ರಸಂಗ ಒದಗಿದಂತೆ ನಡೆಯಲಿಕ್ಕೆ ಬರುವದೆಂದು ಅವರು ನಿರ್ಣಯಿಸಿಕೊಂಡರು. ಯುಕ್ತಿ-ಪ್ರಯುಕ್ತಿಗಳಿಂದ ರಾಜಕುಮಾರನನ್ನು ಚಂಡಾಶೋಕನ ಕೈಯಿಂದ ಪಾರಮಾಡುವೆನೆಂದು ಉಪಗುಪ್ತನು ಹೇಳಿದನು ಅನಂತರದಲ್ಲಿ ಅವನು ಕುಂದಳನ್ನು ಕುರಿತು:- "ಕುಂದ, ಇಲ್ಲಿ ಬಾ. ಈ ಪೂಜ್ಯ ಅತಿಥಿಗಳ ಸಮ್ಮುಖದಲ್ಲಿ ನಾನು ನಿನಗೆ ಹೇಳ ಬೇಕಾಗಿದೆ. ಧನವು ಎಷ್ಟು ಅಪಮಾನಕರವೂ, ಅಧರ್ಮ ಕೃತ್ಯಗಳನ್ನು ಮಾಡಿಸುವಂತಹದೂ ಎಂಬದು ನಿನ್ನ ನಿದರ್ಶನಕ್ಕೆ ಬಂದಿತೆ? ನಾವು ಮನೋ ವಾಕ್ಕಾಯಗಳಿಂದ ಧನದ ತ್ಯಾಗಮಾಡೋಣ. ನಾನು ಈಗ ಮಾತ್ರ ದರಿದ್ರ ರಾಜನಾದೆನು. ಧನವು ಮಣ್ಣಿನಂತೆ ನನಗೆ ಭಾಸಮಾನವಾಗುತ್ತಲಿರುವದು. ಕುಂದ, ನೀನಾದರೂ ಹೀಗೆಯೇ ತಿಳಿದಿರುವೆಯಾ?"

ಕುಂದದೇವಿಯು ಮೌನವಾಗಿದ್ದಳು.

"ಕುಂದ, ನಾನು ನಿನಗೆ ಇನ್ನೊಂದು ಮಾತು ಹೇಳುವದಿದೆ. ನನ್ನ ಹಾಗು ಧನದ ಸಂಬಂಧವು ಹೇಗೆ ಕಡಿಯಲ್ಪಟ್ಟಿತೋ, ಅದರಂತೆ ದುಃಖ-ಪಾಪ ಮೂಲವಾದ ಈ ಸಂಸಾರಸಂಬಂಧವನ್ನೂ ಇಂದು ವಿಚ್ಛೇದಗೊಳಿಸಿರುವೆನು. ಕುಂದ, ಇಂದಿನಿಂದ ನಾವು ಪತಿ-ಪತ್ನಿಯರಲ್ಲ. ದೇವರು ನಿನಗೆ ಒಳಿತು

ಮಾಡಲಿ. ನೀನು ಈ ವಿಶಾಲವಾದ ಜಗತ್ತಿನಲ್ಲಿ ಬೇಕಾದತ್ತ ಸಂಚರಿಸುತ್ತ ಜನಸೇವೆ-ಪ್ರಾಣಸೇವೆ ಮಾಡುತ್ತ ಕಾಲ ಕಳೆ. ನಾನು ರಾಜಕುಮಾರರನ್ನು ಬಂಧವಿಮುಕ್ತರನ್ನಾಗಿ ಮಾಡುವದಕ್ಕೆ ಈಗಲೇ ತೆರಳುವೆನು. ಕುಂದ, ಪತಿ-ಪತ್ನಿ ಸಂಬಂಧದ ಇದೇ ನಮ್ಮ ಕೊನೆಯ ಭೆಟ್ಟಿಯೆಂದು ತಿಳಿ ಜ್ಞಾನವನ್ನು ಹೊಂದು! ಮನಶ್ಶಾಂತಿಯನ್ನು ಪಡೆ!''

ಉಪಗುಪ್ತನು ಹೀಗೆ ನುಡಿದು ಅಲ್ಲಿಂದ ಎದ್ದನು. ಕುಂದಳು ವಜ್ರಾಹತಳಂತೆ ಭೂಮಿಗೆ ಬಿದ್ದಳು ಉಪಗುಪ್ತನು ಅವಳ ಕಡೆಗೆ ಹೊರಳಿ ಸಹ ನೋಡಲಿಲ್ಲ; ಅವನು ಅತ್ಯಂತ ಗಾಂಭೀರ್ಯದಿಂದ ಮನೆಯನ್ನು ಬಿಟ್ಟು ತೆರಳಿದನು!

——

## ೭

ಗ್ರೀಷ್ಮದ ಜ್ವಲಂತ ಉತ್ತಾಪದ ಪರಿವೆಯಿಲ್ಲದೆ ಒಬ್ಬ ಅಶ್ವಾರೋಹಿಯು ಪರ್ವತದ ಕೆಳಗಿನ ಪ್ರದೇಶದಲ್ಲಿ ತನ್ನ ಕುದುರೆಯನ್ನು ವೇಗದಿಂದ ಸಾಗಿಸಿದ್ದನು. ಅವನ ಮುಂದೆ ಒಂದು ಹರಿಣವು ಜೀವದಾಶೆಯಿಂದ ಓಡ ತೊಡಗಿತ್ತು. ಅಶ್ವಾರೋಹಿಯಾದ ಯುವಕನು ತನ್ನ ಧನುಷ್ಯಕ್ಕೆ ಬಾಣವನ್ನು ಹೂಡಿ, ಓಡಿಹೋಗುವ ಚಿಗರೆಗೆ ಗುರಿಯಿಟ್ಟು ಹೊಡೆದನು. ಅವನ ಬಾಣವು ಚಿಗರೆಯ ಕಾಲಿಗೆ ಶಗಲಿತು. ಕೂಡಲೆ ಅದರ ಕಾಲೊಳಗಿಂದ ಬಿಸಿನೆತ್ತರವು ಸುರಿಯಲಾರಂಭಿಸಿತು. ಚಿಗರೆಯು ತನಗಾದ ವೇದನೆಯನ್ನು ಸಹಿಸಿಕೊಂಡು ವೇಗದಿಂದ ಓಡಿ, ಒಂದು ಮರದಡಿಯಲ್ಲಿ ಮರೆಯಾಯಿತು. ಚಿಗರೆಯು ಮರೆಯಾದ್ದರಿಂದ ಆ ಯುವಕನು ಕುದುರೆಯಿಂದ ಕೆಳಗಿಳಿದು, ಭೂಮಿಗೆ ಬಿದ್ದ ಅದರ ರಕ್ತಬಿಂದುಗಳ ಗುರತನ್ನು ನೋಡುತ್ತ ಮುಂದೆ ಸಾಗಿದನು. ಸ್ವಲ್ಪ ದೂರ ಹೋದ ಮೇಲೆ ಗಾಯಹೊಂದಿದ ಚಿಗರೆಯನ್ನು ಉಪಚರಿಸುತ್ತ ಕುಳಿತ ಒಬ್ಬ ಬೌದ್ಧ ಭಿಕ್ಷುವು ಅವನ ಕಣ್ಣಿಗೆ ಬಿದ್ದನು. ಕೂಡಲೆ ಆ ಯುವಕನ ಹೃದಯವು ಸಂತಪ್ತವಾಯಿತು ಆಗ ಅವನು ತಾರಸ್ವರದಿಂದ:—''ಪಾಖಂಡಿ, ನೀನು ಯಾರಿರುವೆ?''

''ನಿಮಗೆ ಕಲ್ಯಾಣವಾಗಲಿ'' ಒಬ್ಬ ಬೌದ್ಧಭಿಕ್ಷುವು ಶಾಂತಸ್ವರದಿಂದ ಆಶೀರ್ವದಿಸಿದನು.

''ನೀನು ಯಾರು?'' ''ನಾನೊಬ್ಬ ಬೌದ್ಧಭಿಕ್ಷುವು.''

''ಭಿಕ್ಷುವೆ, ನಿನ್ನ ಸಾಹಸದಿಂದ ನನ್ನ ಬೇಟೆಯು ನನ್ನ ಕೈಗೆ ದೊರೆಯಿತು. ಅದನ್ನು ಬಿಟ್ಟುಬಿಡು.''

"ಏನು, ಯಾವ ಬೇಟೆಯು?"

"ಈ ಬೇಟೆಯು ನನ್ನದು."

"ಇದು ನಿನ್ನದು ಹೇಗೆ?"

"ನಾನು ಇದನ್ನು ಹೊಡೆದಿರುವೆನು"

"ಹಿಂಸಕನು ಯಾವ ಪ್ರಾಣಿಗಳಿಗೂ ಒಡೆಯನಲ್ಲ; ಅವನು ಪ್ರಾಣಿ ಮಾತ್ರರ ಶತ್ರುವು. ಶತ್ರುವಿಗೆ ಯಾವ ವಿಧದ ಅಧಿಕಾರವೂ ಇರುವದಿಲ್ಲ ಉತ್ಪನ್ನಮಾಡುವವನು ಒಡೆಯನು. ಅವನು ಮಾತ್ರ ಸರ್ವಾಧಿಕಾರಿಯಾಗಿರುವನು"

"ನೀನು ಒಳ್ಳೆಯ ಗಟ್ಟಿಗನಿದ್ದಂತೆ ತೋರುವೆ."

"ಸಾಧುಗಳಲ್ಲಿ ಗಟ್ಟಿಗತನವು ಎತ್ತಣಿಂದ ಬರಬೇಕು?"

"ಹಾಗಿದ್ದರೆ ಈ ನನ್ನ ಬೇಟೆಯನ್ನು ಒಳ್ಳೆಯ ಮಾತಿನಿಂದ ಕೊಟ್ಟು ಬಿಡು."

"ನಾನು ಈ ಹರಿಣವನ್ನು ಕೊಡುವದಿಲ್ಲ ಇದು ನನ್ನ ಆಶ್ರಿತ ಪಶುವು."

"ಇದನ್ನು ನಾನು ಹೊಡೆದಿರುವೆನು."

ಯುವಕನ ಕ್ರೋಧವು ಅನಿವಾರವಾಯಿತು ಅವನಿಗೆ ಇಡೀ ಆಯುಷ್ಯದಲ್ಲ ಈ ಬಗೆಯಾಗಿ ಯಾರೂ ಎದುರುತ್ತರ ಕೊಟ್ಟಿದ್ದಿಲ್ಲ. ಅವನು ಆ ಬೌದ್ಧ ಭಿಕ್ಷುವಿನ ಮಾತಿಗಾಗಿ ರೋಷಗೊಂಡಿದ್ದರೂ, ಹರಿಣವನ್ನು ಬಲಾತ್ಕಾರದಿಂದ ಒಯ್ಯಲಿಕ್ಕೆ ಅಸಮರ್ಥನಾಗಿದ್ದನು. ಯಾಕಂದರೆ ಭಿಕ್ಷುವಿನ ಪ್ರಭಾವವು ಅವನ ಮೇಲೆ ಚನ್ನಾಗಿ ಬಿದ್ದಿತ್ತು. ಕೆಲವು ವೇಳೆಯವರೆಗೆ ಆ ತರುಣನು ಆಲೋಚಿಸುತ್ತ ಸ್ವಸ್ಥವಾಗಿ ಕುಳಿತಿದ್ದನು. ಅನಂತರದಲ್ಲಿ ಅವನು "ನೀನು ಈ ಪಶುವನ್ನು ಏನು ಮಾಡುವೆ?"

"ನಾನು ಇದನ್ನು ಚನ್ನಾಗಿ ಉಪಚರಿಸಿ ಬಿಟ್ಟುಬಿಡುವೆನು. ಗಾಯವು ವಾಸಿಯಾದ ಮೇಲೆ ಇದು ಆನಂದದಿಂದ ತಿರುಗಾಡುತ್ತಿರಲೊಲ್ಲದೇಕೆ?"

"ಈ ಮಾತು ಸುಳ್ಳು. ನೀನು ಇದರ ಮಾಂಸವನ್ನು ತಿನ್ನುವೆ. ನೀನು ಪರಮ ಧೂರ್ತನಿರುವೆ. ಅಂತೆಯೆ ನನ್ನ ಬೇಟೆಯನ್ನು ಅಪಹರಿಸಲೆತ್ನಿಸುತ್ತಿರುವೆ"

"ಯುವಕನೆ, ಅನುಚಿತ ಮಾತುಗಳನ್ನಾಡಬೇಡ. ಹಿಂಸಕನಿಗಿಂತ ರಕ್ಷಕನ ಯೋಗ್ಯತೆಯು ಹೆಚ್ಚಿನದಿರುವದು. ಯಾವ ವ್ಯಕ್ತಿಯು ಒಂದು ಹುಳವನ್ನಾದರೂ ಉತ್ಪನ್ನಮಾಡುವ ಶಕ್ತಿಯಿಲ್ಲದವನಿರುವನೋ, ಅವನು

ಇಂತಹ ದೊಡ್ಡ ಪಶುವನ್ನು ಹೇಗೆ ಕೊಲ್ಲುವನು? ಕೊಲ್ಲಲಿಕ್ಕೆ ಅವನಿಗೆ ಅಧಿಕಾರವಾದರೂ ಏನಿರುವದು? ಬೌದ್ಧ ಧರ್ಮಾನುಯಾಯಿಗಳಾದ ನಾವು ಪ್ರಾಣಿಭಕ್ಷಕರಲ್ಲ; ರಕ್ಷಕರಿರುವೆವು ಅಹಿಂಸೆಯು ನಮ್ಮ ಪರಮ ಧರ್ಮವಾಗಿರುವದು ಸಮೀಪದಲ್ಲಿ ಬುದ್ಧವಿಹಾರವಿರುವದು. ಅಲ್ಲಿ ಎಷ್ಟೋ ಬೌದ್ಧ ಭಿಕ್ಷುಗಳಿರುವರು ಅವರು ಯಾವಾಗಲೂ ಪ್ರಾಣಿಗಳ ಸೇವಾ ಶುಶ್ರೂಷೆಯಲ್ಲಿ ಮಗ್ನರಾಗಿರುವರು ನಮ್ಮ ವಿಹಾರದಲ್ಲಿ ರೋಗಿ ಜೀವ-ಜಂತುಗಳ ಚಿಕಿತ್ಸೆಯೂ ಮಾಡಲ್ಪಡುತ್ತಿರುವದು ಪ್ರೇಮ-ದಯೆಗಳೇ ನಮ್ಮ ಧರ್ಮವಾಗಿರುವದು.''

''ನಿನ್ನ ಬೌದ್ಧವಿಹಾರವನ್ನು ನನಗೆ ತೋರಿಸುವೆಯಾ?''

''ನನ್ನೊಡನೆ ಬಾ.'' ಎಂದು ನುಡಿದು, ಆ ಬೌದ್ಧಭಿಕ್ಷುವು ಅಲ್ಲಿಂದ ಹೊರಟನು ಅವನ ಬಳಿಯಲ್ಲಿ ಇನ್ನೂ ಕೆಲವು ಗಾಯಹೊಂದಿದ ಪಶುಗಳಿದ್ದವು ಅವನು ಬಹಳವಾಗಿ ಗಾಯಪಟ್ಟ ಆ ಚಿಗರೆಯನ್ನು ಹೊತ್ತುಕೊಂಡೇ ದಾರಿ ಹಿಡಿದನು ಉಳಿದ ಪಶುಗಳು ಅವನ ಮುಂದೆ ಸಾವಕಾಶವಾಗಿ ನಡೆದಿದ್ದವು. ಆಗ ಆ ತರುಣನು ಬೌದ್ಧಭಿಕ್ಷುವನ್ನು ಕುರಿತು:—''ನೀನು ವೃದ್ಧನಿರುವೆ. ಈ ಹರಿಣವನ್ನು ಹೊತ್ತುಕೊಂಡು ಹೋಗುವದು ನಿನ್ನಿಂದ ಆಗಲಿಕ್ಕಿಲ್ಲ. ಇದನ್ನು ನನ್ನ ಕಡೆಗೆ ಕೊಡು. ಕುದುರೆಯ ಮೇಲೆ ಹಾಕಿಕೊಂಡು ಬರುವೆನು.'' ಎಂದು ನುಡಿದು, ಆ ಚಿಗರೆಯನ್ನು ಕೈಯಿಂದ ಹಿಡಿದನು. ಕೂಡಲೆ ಅದು ನಿಷೇಧಸೂಚಕವಾಗಿ ಚಟಪಟನೆ ಒದ್ದಾಡತೊಡಗಿತು

ಆಗ ಭಿಕ್ಷುವು:—''ನೀನು ಇದನ್ನು ಮುಟ್ಟಬೇಡ. ನಿನ್ನ ಮೇಲೆ ಈ ಹರಿಣವು ಸಿಟ್ಟಾಗಿರುವದು''

ಹರಿಣವು ಭಿಕ್ಷುಕನ ಹೆಗಲ ಮೇಲೆ ಸುಮ್ಮನೆ ಮಲಗಿತು. ಇದನ್ನು ನೋಡಿ ಆ ಯುವಕನ ಗರ್ವಭಂಗವಾಯಿತು. ಆಗ ಅವನು ತನ್ನಲ್ಲಿಯೆ ವಿಚಾರಮಾಡತೊಡಗಿದನು ''ಪೃಥ್ವಿಯೊಳಗಿನ ಎಲ್ಲ ರಾಜಮುಕುಟಗಳು ನನ್ನ ಚರಣದ ಮೇಲೆ ಬೀಳುತ್ತಿರುವವು. ಎಲ್ಲ ಮುಕುಟವರ್ಧನರು ನನ್ನ ಪ್ರತಿಷ್ಠೆ ಮಾಡುತ್ತಿರುವರು ಎಲ್ಲರೂ ನನಗೆ ಅಂಜುವರು; ಆದರೆ ಈ ಕ್ಷುದ್ರ ಪಶುವು ನನ್ನೊಡನೆ ನಿಷ್ಠುರತೆಯಿಂದ ನಡೆಯತೊಡಗಿರುವದು; ಅಪಮಾನಗೊಳಿಸುತ್ತಲಿರುವದು. ಇದು ಬೌದ್ಧಭಿಕ್ಷುವಿನ ಹೆಗಲ ಮೇಲೆ ಸ್ವಸ್ಥವಾಗಿ ಬಿದ್ದುಕೊಂಡಿರುವದು. ಭಿಕ್ಷುವಿನಲ್ಲಿ ಅಂತಹ ಗುಣವೇನುಂಟು? ಈ ಮೂಕ ಪ್ರಾಣಿಯು ಭಿಕ್ಷುವಿನ ಮೇಲೆ ಪ್ರೇಮ-ವಿಶ್ವಾಸವುಳ್ಳದ್ದಾಗಿ ಆತ್ಮಸಮರ್ಪಣ ಮಾಡಿರುವದು ನನ್ನನ್ನು ನೋಡಿದೊಡನೆಯೆ ಬೆದರುತ್ತಿರುವದು ಮುಟ್ಟಿದರೆ ನಿಷೇಧವನ್ನು ವ್ಯಕ್ತಪಡಿಸುತ್ತಿರುವದು. ನನ್ನಲ್ಲಿ ಅಂತಹ ದುರ್ಗುಣ

ಗಳೇನುಂಟು? ಈ ಮೂಕ ಜೀವಿಗೆ ನನ್ನ ಗುಣ-ದೋಷಗಳ ಪರೀಕ್ಷೆಯು ಹೇಗಾಗಿರಬಹುದು?'' ಎಂದು ಅವನು ವಿಚಾರ ಸಾಗರದಲ್ಲಿ ಮುಳುಗಿದ್ದನು ಬಹಳ ವೇಳೆಯು ವರೆಗೆ ಬೇಟೆಯಾಡಿದ್ದರಿಂದ ಅವನ ವಸ್ತ್ರ-ಪ್ರಾವರಣಗಳೆಲ್ಲ ರಕ್ತಮಯವಾಗಿದ್ದವು. ಆ ತರುಣನು ರಕ್ತಮಯವಾದ ತನ್ನ ವಸ್ತ್ರಗಳನ್ನು ನೋಡಿಕೊಂಡನು. "ಪಶುಗಳು ನನ್ನನ್ನು ಕಂಡರೆ ಅಂಜಿ ಓಡುವ ಕಾರಣವು ಇದೇ!'' ಎಂದು ನುಡಿದು, ದೀರ್ಘವಾದ ನಿಟ್ಟುಸಿರ ಬಿಟ್ಟು, ತನ್ನ ಮುಖವನ್ನು ಬಾಗಿಸಿಕೊಂಡೇ ಆ ಬೌದ್ಧ ಸಾಧುವಿನ ಹಿಂದೆ ಸಾಗಿದನು.

——

೮

ನಿಬಿಡವಾದ ವನಪ್ರದೇಶದಲ್ಲಿ ಬೌದ್ಧವಿಹಾರವಿತ್ತು. ಅದು ಪೂರ್ಣ ಶಾಂತಿಯು ಹಾಗು ಆನಂದದ ಸಾಮ್ರಾಜ್ಯವಾಗಿತ್ತು ಉತ್ತಪ್ತಸೂರ್ಯಕಿರಣಗಳು ಅಲ್ಲಿಯ ದುರ್ಭೇದ್ಯವಾದ ವೃಕ್ಷಸಮುದಾಯವನ್ನು ದಾಟಲಿಕ್ಕೆ ಶಕ್ತವಾಗಿದ್ದಿಲ್ಲ. ಆ ಸಘನಛಾಯೆಯಲ್ಲಿ ಬೌದ್ಧಭಿಕ್ಷುಗಳ ಅನೇಕ ಪರ್ಣಕುಟೀರಗಳಿದ್ದವು. ಅಲ್ಲಿ ಭಿನ್ನಭಿನ್ನ ವಯಸ್ಕರಾದ ವೀತರಾಗ ಬೌದ್ಧಸಾಧುಗಳು ಜ್ಞಾನಚರ್ಚೆ ಮಾಡುತ್ತಿದ್ದರು ಎಷ್ಟೋ ಜನರು ರೋಗಿಗಳೂ ಗಾಯಹೊಂದಿದವುಗಳೂ ಆದ ಪಶುಗಳ ಹಾಗು ರೋಗಗ್ರಸ್ತರಾದ ಮನುಷ್ಯರ ಚಿಕಿತ್ಸೆ ಮಾಡುತ್ತಿದ್ದರು. ನಿರ್ವೈರವಾದ ಆ ಪ್ರದೇಶದಲ್ಲಿ ಎಷ್ಟೋ ಪಶು-ಪಕ್ಷಿಗಳು ಸ್ವೇಚ್ಛೆಯಿಂದಲೂ ನಿರ್ಭಯದಿಂದಲೂ ಸಂಚರಿಸುತ್ತಿದ್ದವು. ಪ್ರಶಾಂತಮನಸ್ಕರಾದ ಬೌದ್ಧ ಯತಿಗಳ ತಪಃಪ್ರಭಾವದಿಂದ ಅಲ್ಲಿಯ ಪಶುಪಕ್ಷಿಗಳು ತಮ್ಮ ನೈಸರ್ಗಿಕ ವೈರವನ್ನು ಮರೆತು ಪ್ರೇಮದಿಂದ ವರ್ತಿಸುತ್ತಿದ್ದವು ಆ ವೃದ್ಧಭಿಕ್ಷುವು ತರುಣನನ್ನು ಸಂಗಡ ಕರೆದುಕೊಂಡು ವಿಹಾರದ ಸಮೀಪಕ್ಕೆ ಬಂದನು ಕೂಡಲೆ ಇಬ್ಬರು ತರುಣ ಭಿಕ್ಷುಗಳು ಅವನ ಎದುರಿಗೆ ಹೋಗಿ, ಅವನು ಹೊತ್ತುಕೊಂಡಿದ್ದ ಹರಿಣ ಶಿಶುವನ್ನು ತೆಗೆದುಕೊಂಡು, ಪರ್ಣಕುಟೀರಕ್ಕೆ ಹೋಗಿ ಅದನ್ನು ಉಪಚರಿಸತೊಡಗಿದರು. ಅವನ ಸಂಗಡ ಇದ್ದ ಪಶುಗಳಾದರೂ ಚಿಕಿತ್ಸೆಗಾಗಿ ಪರ್ಣಕುಟೀರಕ್ಕೆ ಒಯ್ಯಲ್ಪಟ್ಟವು. ಆ ತರುಣನು ಈ ಎಲ್ಲ ದೃಶ್ಯಗಳನ್ನು ನೋಡಿ ಬೆರಗಾದನು. ಇಂತಹ ಆನಂದ-ಶಾಂತಿಗಳನ್ನು ಅವನು ತನ್ನ ಆಯುಷ್ಯದಲ್ಲೆಂದೂ ಕಂಡಿದ್ದಿಲ್ಲ. ಆಗ ಅವನ ಮನಸ್ಸಿನಲ್ಲಿ ಒಂದು ವಿಧದ ನವ್ಯಭಾವನೆಯು ಉತ್ಪನ್ನವಾಯಿತು. ಅವನು ವಿಚಾರಮಗ್ನನಾಗಿ ನಿಂತುಕೊಂಡನು. ಆಗ ಒಂದು ಅದ್ಭುತವಾದ ತೇಜವು ಅವನ ಕಣ್ಣುಗಳನ್ನು ಕುಕ್ಕಿಸಿಬಿಟ್ಟಿತು!

ತತ್‌ಕ್ಷಣದಲ್ಲಿ:—"ಮಹಾಮೊಗಲೀಪುತ್ರ ತಿಷ್ಯನಿಗೆ ಜಯ!" ಎಂದು ಜಯಘೋಷವಾಯಿತು ಯುವಕನು ದಿಟ್ಟಿಸಿ ನೋಡಿದನು; ಸಮ್ಮುಖದಲ್ಲಿ ಒಂದು ತೇಜೋಮೂರ್ತಿಯು ನಡೆದು ಬರುತ್ತಿರುವದು ಅವನ ದೃಷ್ಟಿಗೆ ಬಿತ್ತು ಪ್ರಶಾಂತ ಮುಖಮಂಡಲ, ದಿವ್ಯ ತೇಜಸ್ಸು, ಗಂಭೀರ ಗತಿ ಮೊದಲಾದವುಗಳಿಂದ ಯುಕ್ತವಾದ ಆ ಮೂರ್ತಿಯು ಮಹಾಪ್ರಾಣ ಭಗವಾನ್ ಮೊಗಲೀಪುತ್ರ ತಿಷ್ಯನೆಂಬದು ಆ ತರುಣನಿಗೆ ಗೊತ್ತಾಯಿತು. ಆ ಯುವಕನು ತಿಷ್ಯ ಮಹಾಪ್ರಭೃತಿಯ ದಿವ್ಯ ಚರಿತ್ರವನ್ನು ಕೇಳಿದ್ದನು ಎಷ್ಟು ಪ್ರಯಾಸಪಟ್ಟರೂ ಸಹ ಯಾವ ಮಹಾತ್ಮನ ದರ್ಶನವು ದುರ್ಲಭವಾಗಿರುತ್ತಿತ್ತೋ, ಅಂತಹ ಭಗವಾನ್ ತಿಷ್ಯನು ಕಣ್ಣಿಗೆ ಬಿದ್ದದರಿಂದ ಅವನು ತನ್ನನ್ನು ಧನ್ಯನೆಂದು ತಿಳಿದುಕೊಂಡನು. ಅವನು ಅತ್ಯಂತ ಭಯ-ಭಕ್ತಿಯಿಂದ ಆ ಮಹಾಪುರುಷನನ್ನು ನೋಡುತ್ತ ನಿಂತನು ಅಷ್ಟರಲ್ಲಿ ಭಗವಾನ್ ತಿಷ್ಯನು ಆ ತರುಣನ ಬಳಿಗೆ ಬಂದಿದ್ದನು. ಅವನು ತನ್ನ ಎರಡೂ ಕೈಗಳನ್ನೆತ್ತಿ:—"ಸಮ್ರಾಟ ಚಂಡಾಶೋಕನಿಗೆ ಜಯವಾಗಲಿ"

ಒಂದು ಅತರ್ಕ್ಯವಾದ ಶಕ್ತಿಯ ಪ್ರಭಾವದಿಂದ ಚಕ್ರವರ್ತಿಯು ಸಾಧುವರನ ಚರಣಗಳಮೇಲೆ ಮಸ್ತಕವನ್ನಿರಿಸಿದನು. ಭಿಕ್ಷುಮಂಡಲವು ವಿಸ್ಮಯಪರಿಪೂರ್ಣವಾಯಿತು. ಆಗ ತಿಷ್ಯನು ಚಕ್ರವರ್ತಿಯನ್ನು ಕುರಿತು:-"ಸಮ್ರಾಟ ವೃದ್ಧಭಿಕ್ಷುವು ಅಜ್ಞಾನದಿಂದ ನಿನ್ನೊಡನೆ ವಾದ ವಿವಾದ ಮಾಡಿರುವನು. ನೀನು ಅವನನ್ನು ಕ್ಷಮಿಸು. ನೀನು ಸಾರ್ವಭೌಮನಿರುವೆಯೆಂಬದು ಅವನಿಗೆ ಗೊತ್ತಿಲ್ಲ."

"ಪ್ರಭೋ!" ಸಮ್ರಾಟನು ಕೈಜೋಡಿಸಿ—"ಇಂದು ನಾನು ಕೃತಕೃತ್ಯನಾದೆನು. ಸಾಮ್ರಾಜ್ಯದ ಪ್ರಚಂಡ ಸನ್ಮಾನ ವೈಭವಗಳಲ್ಲಿ ಎಂದೂ ದೊರೆಯದಂತಹ ಮನಶ್ಶಾಂತಿಯು ನನಗೆ ಇಂದು ಈ ತಪೋವನದಲ್ಲಿ ಲಭಿಸಿತು. ಭಗವಾನರ ದರ್ಶನವಾಯಿತು. ಮಹಾತ್ಮರೆ, ಕಲಿಂಗದ ಯುದ್ಧದಲ್ಲಿ ನಾನು ಒಂದು ಲಕ್ಷ ಜನರ ವಧೆಗೆ ಕಾರಣನಾದೆನು. ವಧೆಮಾಡುವವನಿಗಿಂತ ರಕ್ಷಕನು ಶ್ರೇಷ್ಠನೆಂಬ ಮಾತು ನನ್ನ ದೃಷ್ಟಿಪಥದಲ್ಲಿ ಇಂದು ಬಂದಿರುವದು. ಪೃಥ್ವಿಯೊಳಗಿನ ಎಲ್ಲ ರಾಜಮಹಾರಾಜರು ಮಾನ-ಸನ್ಮಾನ ಮಾಡುತ್ತಿರುವರೆಂದು ನಾನು ಬಹಳೇ ಉನ್ಮತ್ತನಾಗಿದ್ದೆನು; ಆದರೆ ಒಂದು ಮೂಕಜೀವಿಯು ಸಹ ನನಗೆ ಏನೂ ಮಹತ್ವ ಕೊಡಲಿಲ್ಲ. ಅದು ನನ್ನ ಆಚರಣೆಯ ಬಗ್ಗೆ ಕಡುತರವಾದ ನಿಷೇಧವನ್ನು ವ್ಯಕ್ತಪಡಿಸಿತು. ಪ್ರಭೋ! ಇಂದು ನನ್ನಲ್ಲಿ ಪ್ರಬಲವಾದ ಆತ್ಮಗ್ಲಾನಿಯು ಉದಯುವಾಗಿರುವದು. ಶರಣಾಗತನಾದ ಈ

ಕಿಂಕರನನ್ನು ದಯಮಾಡಿ ಉದ್ಧರಿಸಬೇಕೆಂದು ಬೇಡಿಕೊಳ್ಳುವೆನು.''

"ಸಮ್ರಾಟ!" ಭಗವಾನ್ ತಿಷ್ಯನು ಅಶೋಕನನ್ನು ಕುರಿತು ಪ್ರಸನ್ನತೆಯಿಂದ:—"ನಿನ್ನಲ್ಲಿ ಧರ್ಮದ ವಿಷಯವಾಗಿ ಅಭಿರುಚಿಯು ಉದಯಿಸಿದ್ದು ಬಹಳೇ ಒಳಿತಾಯಿತು ಭಗವಾನ್ ಬುದ್ಧದೇವನಿಗಾದರೂ ಹೀಗೆಯೇ ಅಕಸ್ಮಾತ್ತಾದ ಘಟನೆಯಿಂದ ಜ್ಞಾನ ಪ್ರಾಪ್ತಿಯಾಯಿತು ಶಕ್ತಿಯು ಹಾಗು ಅಧಿಕಾರದ ಬಲದಿಂದ ಅಧೀನರನ್ನು ವಶದಲ್ಲಿಟ್ಟುಕೊಳ್ಳುವದಕ್ಕಿಂತ ಪ್ರೇಮ ದಯೆಗಳಿಂದ ಪ್ರಾಣಿಮಾತ್ರರ ಮೇಲೆ ವರ್ಚಸ್ಸವನ್ನು ಪ್ರಸ್ಥಾಪಿಸುವದು ಶ್ರೇಯಸ್ಕರವು. ಶರೀರಕ್ಕಿಂತ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳುವದು ನಿಜವಾದ ವಿಜಯವಾಗಿರುವದು. ನೀನು ಪೃಥ್ವಿಯ ಚಕ್ರವರ್ತಿ ಸಮ್ರಾಟನಿರುವೆ. ಪೃಥ್ವಿಯೊಳಗಿನ ಆತ್ಮಗಳನ್ನು ಪ್ರೀತಿಪೂರ್ವಕವಾಗಿ ವಶಪಡಿಸಿಕೊಂಡರೆ. ನೀನು ಅಕ್ಷಯ್ಯ ವಿಜಯಿಯಾಗುವೆ ನಿನ್ನ ಕೀರ್ತಿಯು ಆಚಂದ್ರಾರ್ಕವಾಗಿ ಬಾಳುವದು"

ಸಮ್ರಾಟನು ನತಮಸ್ತಕನಾಗಿ ಕೈಜೋಡಿಸಿ ನಮ್ರತೆಯಿಂದಲೂ ಭಕ್ತಿಯಿಂದಲೂ:—"ಭಗವನ್, ನೀವು ನನಗೆ ನಿಜವಾದ ಜ್ಞಾನವನ್ನು ಉಪದೇಶಿಸಿ ಕೃತಾರ್ಥನನ್ನು ಮಾಡಿದಿರಿ ನಾನು ಪ್ರೇಮ-ದಯೆಗಳಿಂದ ಪ್ರಾಣಿಗಳನ್ನು ಸ್ವಾಧೀನಪಡಿಸಿಕೊಳ್ಳುವೆನು ಕ್ಷಮೆಯೇ ನನ್ನ ಶಸ್ತ್ರವು. ದಯೆಯೇ ನನ್ನ ನೀತಿಯು ತ್ಯಾಗವೇ ನನ್ನ ಶಾಸನವು! ತಮ್ಮ ಉಪದೇಶ ಪ್ರಭಾವದಿಂದ ನನ್ನ ಮನಸ್ಸಿನ ಓಘವು ಪರಿವರ್ತನಹೊಂದಿತು."

"ಹಾಗೆಯೇ ಆಗಲಿ. ಚಕ್ರವರ್ತಿಯೆ, ನೀನು ಚಂಡಾಶೋಕನೆಂಬ ಹೆಸರಿಗೆ ಪ್ರತಿಯಾಗಿ 'ದೇವಾನಾಂ ಪ್ರಿಯಃ' ಎಂಬ ಹೆಸರಿನಿಂದ ಪ್ರಸಿದ್ಧನಾಗುವೆ. ಪ್ರಿಯದರ್ಶಿಯಾದ ಅಶೋಕ ಸಮ್ರಾಟನೆ, ನಿನಗೆ ಕಲ್ಯಾಣವಾಗಲಿ. ಇಂದಿನಿಂದ ನೀನು ದೇವತೆಗಳಿಗೆ ಪ್ರಿಯನಾದೆ. ಚಕ್ರವರ್ತಿಯೆ, ನಾನು ಹೇಳುವ ತತ್ತೋಪದೇಶವನ್ನು ಕೇಳು 'ಬುದ್ಧಂ ಶರಣಂ ಗಚ್ಛಾಮಿ! ಧರ್ಮಂ ಶರಣಂ ಗಚ್ಛಾಮಿ! ಸಂಘಂ ಶರಣಂ ಗಚ್ಛಾಮಿ' ಈ ಉಪದೇಶವನ್ನು ಪಠಿಸು"

ಸಮ್ರಾಟನು ಭೂಮಿಯ ಮೇಲೆ ಮೊಳಕಾಲೂರಿ, ಮೊಗಲೀಪುತ್ರ ತಿಷ್ಯನು ಹೇಳಿದ ಉಪದೇಶ ವಾಕ್ಯಗಳನ್ನು ಪಠಿಸಿದನು. ಅನಂತರದಲ್ಲಿ ತಿಷ್ಯನು ಅವನಿಗೆ ಪವಿತ್ರ ಜಲದಿಂದ ಅಭಿಸಿಂಚನಮಾಡಿ:-"ಸಮ್ರಾಟ ದೇವಾನಾಂಪ್ರಿಯ ಅಶೋಕನಿಗೆ ಜಯವಾಗಲಿ. ಸಮ್ರಾಟ, ಇಲ್ಲಿ ಬಾ. ನಿನಗೆ ಆಚಾರ್ಯರ ಪರಿಚಯಮಾಡಿಕೊಡುವೆನು ನೀನು ಆಚಾರ್ಯರೊಡನೆ ಅತ್ಯಂತ ಭಕ್ತಿಯುತನಾಗಿ ಆಚರಿಸು. ಯಾವನು ಪರಮ ವೀತರಾಗನೂ ಮಹಾನ್ ಧರ್ಮಾತ್ಮನೂ

ಏಕನಿಷ್ಠನೂ ಇರುವನೋ ಅವನ ಆತ್ಮದಲ್ಲಿ ಭಗವಾನ್ ಬುದ್ಧದೇವನ ನಿವಾಸವಿರುವದು. ಅಂತಹನು ನಿನ್ನೊಡನೆ ಇದ್ದು ನಿನ್ನ ಕಲ್ಯಾಣಮಾರ್ಗವನ್ನು ತೋರಿಸುವರಲ್ಲದೆ, ನಿನಗೆ ಸದಾಚರಣೆಯ ಶಿಕ್ಷಣವನ್ನೂ ಕೊಡುವರು. ನೀನು ಆ ಆಚಾರ್ಯರ ಪಾತ್ರಗಳನ್ನು ಅನುಸರಿಸಿ ಇಹ-ಪರಗಳಲ್ಲಿ ಸೌಖ್ಯವನ್ನೂ ಕೀರ್ತಿಯನ್ನೂ ಪೊಂದು.''

ಆಚಾರ್ಯ ಶಿಷ್ಯನು ಹೀಗೆ ನುಡಿದು, ಆ ವನಪ್ರದೇಶದಲ್ಲಿದ್ದ ಒಂದು ಪರ್ಣಕುಟೀರದ ಬಾಗಿಲ ಬಳಿಗೆ ಹೋಗಿ:—''ಆಚಾರ್ಯ ಉಪಗುಪ್ತರೆ, ಸಮ್ರಾಟ ಅಶೋಕ ಮಹಾರಾಜರು ನಿಮ್ಮ ಸೇವೆಗಾಗಿ ಆತುರರಾಗಿರುವರು.''

ಆಚಾರ್ಯ ಉಪಗುಪ್ತನೇ ಶ್ರೇಷ್ಠಿವರ ಉಪಗುಪ್ತನು; ಕುಂದದೇವಿಯ ಪತಿಯು! ಅವನು ಈಗ ಬೌದ್ಧ ಭಿಕ್ಷುವಾಗಿದ್ದನು. ಮುಂಡಿತ ಶಿರನೂ, ಪೀತವಸ್ತ್ರ ಪರಿಧಾನ ಮಾಡಿದವನೂ, ಶಿಷ್ಯನ ಅನುಗ್ರಹಕ್ಕೆ ಪಾತ್ರನಾದವನೂ, ಬೌದ್ಧಧರ್ಮ ತತ್ವಕೋವಿದನೂ, ಸದ್ಧರ್ಮದಿಂದ ತೇಜಃಪುಂಜನಾದವನೂ ಆದ ಆಚಾರ್ಯ ಉಪಗುಪ್ತನನ್ನು ನೋಡಿ, ಅಶೋಕ ಚಕ್ರವರ್ತಿಯು ಪ್ರಣಾಮಮಾಡಿ:—''ಆಚಾರ್ಯರೆ, ನನಗೆ ಸದ್ಧರ್ಮವನ್ನುಪದೇಶಿಸಿರಿ.''

ಆಚಾರ್ಯ ಉಪಗುಪ್ತನು ಅಶೋಕ ಚಕ್ರವರ್ತಿಯ ಮುಖವನ್ನು ನೋಡತೊಡಗಿದನು. ಅವನ ನೇತ್ರಗಳು ಆನಂದಬಾಷ್ಪಪೂರ್ಣವಾಗಿದ್ದವು ಆಗ ಆಚಾರ್ಯ ಶಿಷ್ಯನು:—''ಆಚಾರ್ಯ ಉಪಗುಪ್ತರೆ, ಈ ಚಕ್ರವರ್ತಿಯು ನಿಮ್ಮ ತತ್ವಾವಧಾನದಿಂದ ಪೃಥ್ವಿಯ ಮೇಲೆ ಧರ್ಮ ವಿಸ್ತಾರ ಮಾಡುವನು. ನೀವು ಇವನಿಗೆ ಸನ್ಮಾರ್ಗದರ್ಶಕರಾಗಿರಿ. ನೀವು ಇವನ ಪ್ರಣಾಮವನ್ನು ಅವಶ್ಯವಾಗಿ ಸ್ವೀಕರಿಸಿರಿ.''

ಆಚಾರ್ಯ ಉಪಗುಪ್ತನು ಅವರುದ್ಧ ಕಂಠದಿಂದ—''ದೇವಾನಾಂಪ್ರಿಯ ಅಶೋಕ ಸಾರ್ವಭೌಮರಿಗೆ ಜಯವಾಗಲಿ! ಆಚಾರ್ಯರೆ, ಸಮ್ರಾಟನ ಭಾರವನ್ನು ನನ್ನ ಮೇಲೆ ಹೊರಿಸಬೇಡಿರಿ. ಸಮ್ರಾಟರೆ, ಆಚಾರ್ಯ ಶಿಷ್ಯರಂತಹ ವಿಭೂತಿಗಳಿರಲಾಗಿ, ನನ್ನಂತಹ ಸಾಮಾನ್ಯನ ಶಿಷ್ಯರಾಗಲು ಯತ್ನಿಸುವದೇಕೆ?''

''ಆಚಾರ್ಯ, ನಿಮ್ಮ ಅಭಿಪ್ರಾಯವು ನನಗೆ ತಿಳಿಯಿತು. ಸಮ್ರಾಟನು ನಿಮ್ಮ ಉಪದೇಶದಂತೆ ನಡೆಯುವನು ನೀವು ಯಾವ ಬಗೆಯ ಸಂಶಯವನ್ನೂ ತೆಗೆದುಕೊಳ್ಳಬೇಡಿರಿ. ಮನುಷ್ಯನಲ್ಲಿಯ ಅಜ್ಞಾನರೂಪಿಯಾದ ಆವರಣವನ್ನು ಭೇದಿಸಲಿಕ್ಕೆ ರಹಸ್ಯವಿದನ ಆವಶ್ಯಕತೆಯುಂಟು ನೀವು ಮನುಷ್ಯನಿಗೆ ಜ್ಞಾನೋದಯವಾಗುವಂತೆ ಉಪದೇಶಿಸಲು ಯೋಗ್ಯರಿರುವಿರಿ. ನೀವು

ನಿಮ್ಮ ಈ ಶಿಷ್ಯನ ಕಲ್ಯಾಣಚಿಂತನೆ ಮಾಡತಕ್ಕದ್ದು. ಇನ್ನು ನನ್ನ ಕೆಲಸವು ತೀರಿತು." ಎಂದು ಮೊಗಲೀಪುತ್ರ ಆಚಾರ್ಯ ಶಿಷ್ಯನು ಆಚಾರ್ಯ ಉಪಗುಪ್ತನನ್ನು ಕುರಿತು ನುಡಿದು, ಅಂತರ್ಧಾನನಾದನು

ಆಚಾರ್ಯ ಉಪಗುಪ್ತನೂ ಸಮ್ರಾಟನೂ ವಿಮೂಢರಾಗಿ ಸ್ವಲ್ಪ ವೇಳೆಯವರೆಗೆ ಮೌನವಾಗಿದ್ದರು ಅನಂತರದಲ್ಲಿ ಉಪಗುಪ್ತನು—"ಸಮ್ರಾಟರೆ, ಒಳಗೆ ನಡೆಯಿರಿ. ನನ್ನ ಪರ್ಣಕುಟೀರವನ್ನು ನಿಮ್ಮ ಪಾದಧೂಳಿಯಿಂದ ಪವಿತ್ರಗೊಳಿಸಿರಿ."

ಇಬ್ಬರೂ ಮಹಾತ್ಮರು ಪರ್ಣಕುಟೀರವನ್ನು ಪ್ರವೇಶಿಸಿದರು.

---

೬

"ಹೇ ಸಮ್ರಾಟ! ಜೀವನವು ದುಃಖಪೂರ್ಣವಿರುವದು ಜನ್ಮವು ದುಃಖವು, ನಾಶವು ದುಃಖವು, ಮೃತ್ಯುವು ದುಃಖವು. ಯಾವ ಪದಾರ್ಥವು ನಮಗೆ ವಿರೋಧಿಯಾಗಿರುವವೋ ಆ ಪದಾರ್ಥವು ಉಪಸ್ಥಿತವಾದರೆ ದುಃಖವಾಗುವದು. ಯಾವ ಪದಾರ್ಥದ ಅಭಿಲಾಷೆ ಹೊಂದಿರುವೆವೋ, ಆ ಪದಾರ್ಥವು ಕೈಸೇರದಿದ್ದರೆ ದುಃಖವಾಗುವದು. ಸಾರಾಂಶವೇನಂದರೆ, ಜೀವನದ ಐದು ವಿಧದ ಕಾಮನೆಗಳಿಗೆ ವಶವಾಗುವದು ದುಃಖವಾಗಿರುವದು. ಲಾಲಸೆಯು ಪುನರ್ಜನ್ಮಕ್ಕೆ ಕಾರಣೀಭೂತವಿರುವದು ಸತ್ಯವನ್ನು ಅವಲಂಬಿಸಿದರೆ ದುಃಖವು ದೂರವಾಗುವದು. ಲಾಲಸೆಯನ್ನು ನಿರೋಧಗೊಳಿಸುವದರಿಂದ ಸತ್ಯವು ಪ್ರಾಪ್ತವಾಗುತ್ತದೆ. ನಿರೋಧವು ಉಪಯುಕ್ತವಾದದ್ದು. ಅದು ಲಾಲಸೆಯನ್ನು ತ್ಯಜಿಸ ಹಚ್ಚುವದು; ಕಾಮನೆಗಳನ್ನು ನಾಶಗೊಳಿಸುವದು; ಮುಕ್ತಿಯನ್ನು ದೊರಕಿಸುವದು. ಪ್ರಿಯದರ್ಶಿಗಳೆ, ನಿಮಗೆ ಈ ಗೂಢತತ್ವವು ತಿಳಿಯಿತೆ?"

"ಭಗವಾನ್, ನನಗೆ ತಿಳಿಯಲೊಲ್ಲದು." ಎಂದು ಅಶೋಕನು ಆಚಾರ್ಯ ಉಪಗುಪ್ತನಿಗೆ ಉತ್ತರವಿತ್ತನು.

"ಚಕ್ರವರ್ತಿಯೇ, ಜೀವನವು ದುಃಖಪೂರ್ಣವಿರುವದು. ಅದರ ಸುಖದ ಲಾಲಸೆಯೂ ದುಃಖಮಯವಾಗಿರುವದು. ಲಾಲಸೆಯು ನಾಶವಾಯಿತೆಂದರೆ ದುಃಖವೂ ನಾಶವಾಗುವದು. ಪವಿತ್ರ ಜೀವನದಿಂದ ಲಾಲಸೆಯು ನಷ್ಟವಾಗುವದು. ಪವಿತ್ರ ಜೀವನವು ಎಂಟು ವಿಷಯಗಳಲ್ಲಿ ವಿಭಾಗಿಸಲ್ಪಟ್ಟಿರುವದು:—

'ಸತ್ಯ ವಿಶ್ವಾಸ, ಸತ್ಯಕಾಮನೆ, ಸತ್ಯವಾಕ್ಯ, ಸತ್ಯವ್ಯವಹಾರ, ಜೀವನ ನಿರ್ವಾಹದ ಸತ್ಯ ಉಪಾಯ, ಸತ್ಯ ಉದ್ಯೋಗ, ಸತ್ಯ ವಿಚಾರ, ಸತ್ಯ ಧ್ಯಾನ ಈ ಎಂಟು ವಿಧಿಗಳು ಎಂಟು ಗ್ರಂಥಗಳ ಸಮಾನವಿರುವವು. ಶುದ್ಧ ವಿಚಾರ, ಶುದ್ಧ ವಿಶ್ವಾಸಗಳನ್ನು ಅಂತು ಆ ಗುಣಗಳನ್ನು ಸತ್ಕರಿಸಬೇಕು ಉಚ್ಚತಮವಾದ ಉದ್ದೇಶ-ಕಾಮನೆಗಳನ್ನು ಹೃದಯ ನೇತ್ರಗಳ ಸಮ್ಮುಖದಲ್ಲಿರಿಸಿಕೊಂಡು ಆಚರಿಸಬೇಕು. ಪ್ರತಿಯೊಂದು ವಾಕ್ಯವು ಸತ್ಯವೂ ಸುಶೀಲವೂ ಆಗಿರಲಿಕ್ಕೆಬೇಕು ವ್ಯವಹಾರವು ಸತ್ಯವೂ ಪೂರ್ಣ ಶುದ್ಧವುಳ್ಳದ್ದೂ ಆಗಬೇಕು ಜೀವನದ ತರಣೋಪಾಯವನ್ನು ಈ ಮೇರೆಗೆ ಹುಡುಕಿ ಕಂಡು ಹಿಡಿಯಬೇಕು. ಒಳಿತು ಮಾಡುವದರಲ್ಲಿಯೂ, ದಯೆ, ಸುಶೀಲತೆ, ಪರೋಪಕಾರ ಮೊದಲಾದ ಕಾರ್ಯಗಳಲ್ಲಿಯೂ ನಿರಂತರವಾಗಿ ತೊಡಗಿ, ಅಂತಕಾಲದ ವರೆಗೆ ಸದುದ್ಯೋಗ ರತನಾಗಬೇಕು. ಪ್ರತಿಯೊಂದು ಕಾರ್ಯವನ್ನು ಮನಃಪೂರ್ವಕವಾಗಿ ಮಾಡಬೇಕು. ಶಾಂತಿ-ಧೀರತೆಗಳಿಂದ ಜೀವನಕ್ಕೆ ಸೌಖ್ಯವು ದೊರೆಯುತ್ತದೆ. ಕಾಮನೆ, ಮನಃ ಕ್ಷೋಭೆ, ಜೀವನದ ಲಾಲಸೆ ಮೊದಲಾದವುಗಳನ್ನು ಜಯಿಸಲಿಕ್ಕೆಬೇಕು. ಸಮ್ರಾಟ್, ತಥಾಗತ ಬುದ್ಧದೇವರ ಉಪದೇಶದ ಸಾರವನ್ನೇ ನಾನು ನಿನಗೆ ಹೇಳಿರುವೆನು ಇದನ್ನು ನೀನು ತಿಳಿದುಕೊಂಡೆಯಾ?''

'ಆಚಾರ್ಯರೆ,'' ಅಶೋಕ ಸಮ್ರಾಟನು ಭಕ್ತಿಭಾವದಿಂದ:—''ಈ ಸಂಸಾರದಲ್ಲಿ ಸುಖಿಗಳು ಯಾರು?''

"ಯಾರು ತಮ್ಮ ಜೀವನ ಯಾತ್ರೆಯನ್ನು ಮುಗಿಸಿರುವರೋ, ಯಾರು ಶೋಕ-ಮೋಹಾದಿಗಳನ್ನು ತ್ಯಜಿಸಿರುವರೋ, ಯಾರು ಎಲ್ಲ ರೀತಿಯಿಂದಲೂ ಸ್ವಾತಂತ್ರ್ಯವನ್ನು ಹೊಂದಿರುವರೋ, ಯಾರು ಐಹಿಕ ಬಂಧನಗಳನ್ನು ಹರಿದೊಗೆದಿರುವರೋ ಅವರಿಗೆ ದುಃಖವು ಬಾಧಿಸಲಾರದು. ಅಂತಹರೇ ನಿತ್ಯ ಸುಖಿಗಳು."

"ಆಚಾರ್ಯಮಹೋದಯರೆ, ನಾನು ಚಿರದುಃಖಿಯಿರುವೆನು. ನಾನು ಹೇಗೆ ಸುಖಿಯಾಗುವೆನೆಂಬುದನ್ನು ಉಪದೇಶಿಸಿ ಕರ್ತವ್ಯಪಥವನ್ನು ತೋರಿಸಿರಿ."

''ಸಮ್ರಾಟ್, ಸನ್ಮಾರ್ಗಿಯು ಯಾವ ಜೀವಿಗಳ ಹಿಂಸೆಯನ್ನೂ ಮಾಡಬಾರದು; ಹಾಗು ಮಾಡಿಸಬಾರದು. ಎರಡನೆಯವರು ತನ್ನನ್ನು ಹೊಡೆದರೆ ಅವರಿಗೆ ಅಮರ್ಯಾದೆ ಮಾಡಬಾರದು. ಬಲವುಳ್ಳವುಗಳಿರಲಿ, ನಿರ್ಬಲವಿರಲಿ, ಯಾವ ಜೀವ-ಜಂತುಗಳನ್ನಾದರೂ ಹಿಂಸಿಸುವದಕ್ಕೆ ವಿರೋಧ ಮಾಡಬೇಕು.

"ಯಾರ ವಸ್ತುಗಳನ್ನೂ ಅಪಹರಿಸಬಾರದು ತನ್ನ ಪದಾರ್ಥಗಳನ್ನು ಜನರು ಅಪಹರಿಸಬಾರದೆಂದು ಇಚ್ಛಿಸುತ್ತಿರುವಂತೆ, ಎರಡನೆಯವರ ಪದಾರ್ಥಗಳನ್ನಾದರೂ ತಾನು ತೆಗೆದುಕೊಳ್ಳಲೆತ್ನಿಸಬಾರದು

'ವ್ಯಭಿಚಾರವು ಉರಿಯೆಂದು ತಿಳಿದು ಇದನ್ನು ಬಿಟ್ಟುಬಿಡಬೇಕು. ಯಾರಿಗೆ ಇಂದ್ರಿಯನಿಗ್ರಹ ಮಾಡಲಿಕ್ಕೆ ಸಾಧ್ಯವಿರುವದಿಲ್ಲವೋ, ಅಂತಹರು ಪರಸ್ತ್ರೀ ಸಂಗವನ್ನಾದರೂ ಬಿಡಬೇಕು.

"ಸುಳ್ಳು ಮಾತಾಡಬಾರದು. ಎರಡನೆಯವರಿಗೆ ಸುಳ್ಳುಮಾತಾಡಗೊಡಬಾರದು. ಸುಳ್ಳಾಡುವವರ ಮಾನಖಂಡನೆ ಮಾಡಬಾರದು. ಎಲ್ಲ ಬಗೆಯ ಅಸತ್ಯಗಳನ್ನು ತ್ಯಜಿಸಬೇಕು.

"ಮಾದಕ ದ್ರವ್ಯ ಸೇವನೆ ಮಾಡಬಾರದು. ಎರಡನೆಯವರಿಗೆ ಅವುಗಳನ್ನು ಸೇವಿಸಗೊಡಬಾರದು. ಮಾದಕ ಪದಾರ್ಥಗಳನ್ನು ಸೇವಿಸದವರನ್ನು ಸಂಭಾವಿಸಬೇಕು.

"ಸಮ್ರಾಟ್, ಈ ಐದು ಬಗೆಯ ಶೀಲಗಳನ್ನು ಸದ್ಧರ್ಮಿಯು ಅವಶ್ಯವಾಗಿ ಪಾಲಿಸಲಿಕ್ಕೆಬೇಕು"

"ಭಗವಾನ್!" ಅಶೋಕನು ನಮ್ರತೆಯಿಂದ:—"ನಾನು ಈ ಶೀಲಗಳನ್ನು ಪಾಲಿಸುವೆನು."

"ಭಗವಾನ್ ಬುದ್ಧದೇವನ ಉಪದೇಶವು ಈ ಬಗೆಯಾಗಿರುವದು:—

"ವೈರದಿಂದ ವೈರವು ಎಂದೂ ನಾಶವಾಗುವದಿಲ್ಲ. ಅದು ಪ್ರೀತಿಯಿಂದಲೇ ನಾಶವಾಗುವದು. ಅದರ ಸ್ವಭಾವವೇ ಈ ರೀತಿಯಾಗಿರುವದು.

"ಯಾರು ನಮ್ಮ ವೈರ ಮಾಡುವರೋ, ಅವರಿಗೆ ನಾವು ಪ್ರೇಮವನ್ನು ತೋರಿಸಬೇಕು

"ಕ್ರೋಧವನ್ನು ಪ್ರೀತಿಯಿಂದ ಜಯಿಸಬೇಕು. ಕೆಡಕನ್ನು ಒಳಿತಿನ ಸಹಾಯದಿಂದ ಪರಾಭವಗೊಳಿಸಬೇಕು. ನೀಚತನವನ್ನು ಉದಾರತೆಯಿಂದಲೂ, ಅಸತ್ಯವನ್ನು ಸತ್ಯದಿಂದಲೂ ಜಯಿಸಬೇಕು.

"ನಿರ್ಗಂಧ ಕುಸುಮಗಳು ಚಲೋ ಬಣ್ಣದವಾಗಿದ್ದರೂ ಅವು ಸುಂದರವಲ್ಲ. ಅದರಂತೆ ಮನುಷ್ಯನು ಸದ್ಗುಣಗಳಿಂದ ಅಲಂಕೃತನಾಗಿದ್ದರೆ ಅವನು ಶ್ರೇಷ್ಠನೆನಿಸಿಕೊಳ್ಳುವನಲ್ಲದೆ, ಚೆಲುವಿಕೆಯಿಂದ ಸುಂದರನಾಗಲಾರನು.

"ಸತ್ಕರ್ಮ ಮಾಡುವವನು ಸಂಸಾರಬಂಧನದಿಂದ ಮುಕ್ತನಾಗಿ ಪಾರಲೌಕಿಕ ಸೌಖ್ಯವನ್ನು ಹೊಂದುತ್ತಾನೆ. ಅವನ ಸತ್ಕರ್ಮಗಳೇ ಅವನಿಗೆ ಪುತ್ರನಂತೆ ಸ್ವಾಗತ ಮಾಡುತ್ತವೆ.

"ಕೇವಲ ಕೂದಲು ಬಿಳಿಯುವಾದ ಮಾತ್ರದಿಂದ ಅವನು ದೊಡ್ಡವನಾಗಲಾರನು ಅವನು ವೃದ್ಧನೆನಿಸಿಕೊಂಡದ್ದು ವ್ಯರ್ಥವೇ ಸರಿ ಯಾರಲ್ಲಿ ಸತ್ಯ, ಪುಣ್ಯ, ಪ್ರೀತಿ, ಆತ್ಮನಿರೋಧ, ಸಂಯಮ, ಪಾವಿತ್ರ್ಯ, ಬುದ್ಧಿವಂತಿಕೆ ಮೊದಲಾದ ಗುಣಗಳಿರುವವೋ ಅವನೇ ದೊಡ್ಡವನು."

ಆಚಾರ್ಯ ಉಪಗುಪ್ತನು ಈ ಮೇರೆಗೆ ಉಪದೇಶಿಸಿ ಮೇಲೆ ನೋಡಿ: "ಭಗವಾನ್ ಶಾಕ್ಯಮುನೆ! ಪ್ರಿಯದರ್ಶಿ ಅಶೋಕಮಹಾರಾಜನಿಗೆ ಕಲ್ಯಾಣ ಮಾಡು! ಅವನ ಧರ್ಮದ ವಿಜಯವಾಗಲಿ!"

ಎಂದು ನುಡಿದು ಅಶೋಕನನ್ನು ಕುರಿತು:—"ಅಶೋಕಸಾರ್ವಭೌಮನೆ! ನಾನು ನಿನಗೆ ಮಹಾಧರ್ಮತತ್ವಗಳನ್ನು ಉಪದೇಶಿಸಿರುವೆನು. ನೀನು ಇಂದಿನಿಂದ ಬೌದ್ಧಧರ್ಮದೀಕ್ಷೆಹೊಂದಿದೆ. ನೀನು ದೇಶ-ದೇಶಾಂತರಗಳಲ್ಲಿ ಈ ಪವಿತ್ರ ಧರ್ಮದ ವಿಸ್ತಾರ ಮಾಡು."

"ಮಹದಾಜ್ಞೆ" ಎಂದು ಅಶೋಕನು ನತಮಸ್ತಕನಾಗಿ ನುಡಿದು, ಗುರುಗಳ ಚರಣಾರವಿಂದಗಳ ಮೇಲೆ ಮಸ್ತಕವಿರಿಸಿದನು.

---

## ೧೦

ಪ್ರಿಯದರ್ಶಿ ಅಶೋಕ ಸಾರ್ವಭೌಮನು ಸೌಧಾಗ್ರದಲ್ಲಿ ಕುಳಿತಿದ್ದನು. ಅವನ ಮುಖಮುದ್ರೆಯು ಅತ್ಯಂತ ಮ್ಲಾನವಾಗಿತ್ತು. ಅವನ ಮನಸ್ಸಿನಲ್ಲಿ ಒಂದು ವಿಧದ ಆಲೋಚನೆಯು ಒಂದೇಸವನೆ ಕಟೆಯುತ್ತಿತ್ತು. ಭಾರತವರ್ಷದ ಸಮ್ರಾಟನಾದ ಅವನ ಮನಸ್ಸಿನಲ್ಲಿ ಉದಯಿಸಿದ್ದ ಗಹನವಾದ ಸಮಸ್ಯವೆಂದರೆ ಕಲಿಂಗರಾಜನ ದುರ್ಧರ್ಷವಾದ ಅಪಘಾತದ ವಿಷಯವು. ಕಲಿಂಗ ಸಿಂಹಾಸನವನ್ನು ನಾಶಗೊಳಿಸಿ, ಆ ರಾಜ್ಯದೊಳಗಿನ ಒಂದು ಲಕ್ಷ ಜನರನ್ನು ವಧೆಮಾಡಿದ್ದಕ್ಕಾಗಿ ಅವನು ಪಶ್ಚಾತ್ತಾಪಬಡತೊಡಗಿದ್ದನು. ಕಲಿಂಗರಾಜನ ಹಾಗು ಅವನ ಪರಿವಾರದ ಅವಸ್ಥೆಯೇನಾಯಿತೆಂಬದರ ಗಂಧವಾರ್ತೆಯೂ ಅಶೋಕನಿಗಿದ್ದಿಲ್ಲ.

ಸಮ್ರಾಟನ ಜ್ಞಾನಚಕ್ಷುಗಳು ತೀಕ್ಷ್ಣವಾಗಿದ್ದವು. ಅವನು ಈಗ ಮಹಾ ದಯಾಧರ್ಮ ತತ್ವಗಳನ್ನು ತಿಳಿದಿದ್ದನು. ತಾನು ಮಾಡಿದ ದುಷ್ಕರ್ಮಗಳ ಪ್ರತೀಕಾರವು ಹೇಗಾದೀತೆಂದು ಅವನು ಕ್ಲೇಶಬಡುತ್ತಿದ್ದನು. ಕಲಿಂಗ ರಾಜಮನೆತನದವರು ಯಾರಾದರೂ ಶೋಧವಾದರೆ, ಅವರ ದುರ್ದೆಶೆಯನ್ನು ದೂರಮಾಡಬೇಕೆಂದು ಅವನು ಸತ್ಯಸಂಕಲ್ಪ ಮಾಡಿಕೊಂಡಿದ್ದನು.

ಹಠಾತ್ತಾಗಿ ದಂಡಧರನು ಚಕ್ರವರ್ತಿಯ ಬಳಿಗೆ ಬಂದು:—"ಪ್ರಭೋ, ಕಲಿಂಗ ರಾಜಕುಮಾರನನ್ನು ಕರೆದುಕೊಂಡು ನಗರಪಾಲರು ಆಗಮಿಸಿರುವರು"

ಅಶೋಕನು ಪ್ರಫುಲ್ಲಿತ ವದನನಾಗಿ:—"ಅವರನ್ನು ಈಗಲೆ ಇಲ್ಲಿಗೆ ಕಳುಹಿಸು"

ಪರಕ್ಷಣದಲ್ಲಿ ನಗರಪಾಲನು ರಾಜಕುಮಾರನೊಡನೆ ಬಂದು, ಚಕ್ರವರ್ತಿಗೆ ಅಭಿವಾದನೆ ಮಾಡಿ ರಾಜಕುಮಾರನನ್ನು ಕುರಿತು:—"ರಾಜಕುಮಾರರೆ, ಸಮ್ರಾಟರಿಗೆ ನಮಸ್ಕರಿಸಿರಿ"

ಆಗ ರಾಜಕುಮಾರನು ಹಸನ್ಮುಖನಾಗಿ:—"ನಗರಪಾಲರೆ, ನಿಮ್ಮ ಆಜ್ಞೆಯ ಆವಶ್ಯಕತೆಯಿಲ್ಲ. ನೀವು ಸೌಜನ್ಯದಿಂದ ಸೂಚನೆ ಮಾಡಿದ್ದಕ್ಕಾಗಿ ನಾನು ಋಣಿಯಾಗಿರುವೆನು. ಇನ್ನು ನಾನು ನಿಮಗೆ ತಿಳಿಸುವದೇನಂದರೆ, ಸಮ್ರಾಟನೊಡನೆ ಯಾವ ಬಗೆಯ ವ್ಯವಹಾರ ಮಾಡಬೇಕೆಂಬದನ್ನು ನಾನು ಅರಿತಿರುವೆನು ನನಗೆ ನಿಮ್ಮ ಸೂಚನೆಗಳ ಆವಶ್ಯಕತೆಯಿಲ್ಲ. ನೀವು ಚಕ್ರವರ್ತಿಗಳ ಆಜ್ಞೆಹೊಂದಿ ಇಲ್ಲಿಂದ ಹೊರಡುವದೇ ಒಳಿತು."

ರಾಜಕುಮಾರನ ಪ್ರಗಲ್ಭವಾದ ಮಾತುಗಳನ್ನು ಕೇಳಿ ನಗರಪಾಲನು ವಿಮೂಢಮನಸ್ಕನಾದನು ಸಮ್ರಾಟನಾದರೂ ಚಕಿತನಾಗಿ ಅವನ ಮುಖವನ್ನು ನೋಡುತ್ತ ಕುಳಿತನು.

ರಾಜಕುಮಾರನು ಅಶೋಕನನ್ನು ಕುರಿತು:—"ಮಹಾರಾಜರೆ, ನಗರಪಾಲರಿಗೆ ಇಲ್ಲಿಂದ ಹೊರಡಲು ಆಜ್ಞೆಕೊಡಿರಿ. ಇವರು ಹೋದ ಮೇಲೆ ನಾನು ನಿಮಗೆ ಅಭಿವಾದನೆಗಳನ್ನರ್ಪಿಸುವೆನು."

ಅಶೋಕನು ನಗರಪಾಲನಿಗೆ ಹೊರಡಲು ಸೂಚಿಸಿ, ಕುಮಾರನ ಬಳಿಗೆ ಬಂದು:-"ಕಲಿಂಗರಾಜಕುಮಾರ, ಅಭಿವಾದನೆಯ ಆವಶ್ಯಕತೆಯಿಲ್ಲ ನಾನು ನಿನ್ನ ಪರಿವಾರದ ಹಾಗು ರಾಜ್ಯದ ಮೇಲೆ ಕಡುತರವಾದ ಅನ್ಯಾಯ ಮಾಡಿರುವೆನು. ನಿನ್ನ ಪರಮಪೂಜ್ಯ ಪಿತನು ಎಲ್ಲಿರುವನೆಂಬದು ಇದುವರೆಗೂ ತಿಳಿಯದ್ದರಿಂದ ಮನಸ್ಸು ತಲ್ಲಣಿಸತೊಡಗಿದೆ. ನಾನು ಮಾಡಿದ ಅತ್ಯಾಚಾರಕ್ಕಾಗಿ ನನಗೆ ಕಠಿಣವಾದ ಶಾಸನವನ್ನು ವಿಧಿಸು. ಪ್ರಿಯರಾಜಕುಮಾರ, ನೀನು ನನಗೆ ಶತ್ರುವಲ್ಲ; ಪರಮ ಮಿತ್ರನಿರುವೆ"

"ಸಮ್ರಾಟರ ಮನಸ್ಸು ಅತ್ಯಂತ ಉದಾತ್ತವಾದದ್ದಿರುವದು. ಮಹಾರಾಜರೆ, ಸಂಗ್ರಾಮದಲ್ಲಿ ಜಯ-ಪರಾಜಯಗಳು ನಿಶ್ಚಿತವಾದವುಗಳಲ್ಲ. ನೀವು ಜಯಶಾಲಿಗಳಾಗಿರುವದರಿಂದ ನಾವು ವಿಪತ್ತಿಗೊಳಗಾದೆವು ವಿಜಿತ

ರಾಜ್ಯದ ಒಬ್ಬ ಯಃಕಶ್ಚಿತ್ ರಾಜಪುತ್ರನಿಗೆ ಇಷ್ಟು ಶಿಷ್ಟಾಚಾರ ಸಂಭಾವನೆಗಳನ್ನು ಕೊಡುವ ಅವಶ್ಯಕತೆಯಿಲ್ಲ.''

"ರಾಜಕುಮಾರ, ನಾನು ನಿಷ್ಕಾರಣವಾಗಿ ಸಮೃದ್ಧಶಾಲಿಯಾದ ಕಲಿಂಗರಾಜ್ಯವನ್ನು ಹಾಳುಮಾಡಿ, ನಿನ್ನ ತಂದೆಯನ್ನು ಪದಭ್ರಷ್ಟಗೊಳಿಸಿದೆನು; ಹಾಗು ಅವನ ಪರಿವಾರವಾದ ನಿಮ್ಮೆಲ್ಲರನ್ನು ವನವಾಸಿಗಳನ್ನಾಗಿ ಮಾಡಿದೆನು. ಕುಮಾರ, ನಿನ್ನನ್ನು ನೋಡಿದ ಕೂಡಲೆ ನನ್ನ ಹೃದಯದಲ್ಲಿ ಪ್ರೇಮಾಂಕುರವು ಉತ್ಪನ್ನವಾಗಿ ಇಷ್ಟರಲ್ಲಿಯೇ ಅದು ಪರಮಾವಧಿಯಾಗಿ ಬೆಳೆದಿರುವುದು. ಪ್ರಿಯಕುಮಾರ, ನಿನ್ನ ಕೈಯನ್ನು ನನ್ನ ಕೈಯಲ್ಲಿ ಕೊಡು''

ಕುಮಾರನು ಸ್ವಲ್ಪ ಹಿಂದೆ ಸರಿದು:—"ಶ್ರೀಮಾನ್, ಈ ಸೇವಕನು ಇಷ್ಟು ಸನ್ಮಾನಕ್ಕೆ ಪಾತ್ರನಲ್ಲ. ಶತ್ರುಪುತ್ರನಿಗೆ ಇಷ್ಟು ಸತ್ಕಾರವು ಅನುಚಿತವು."

"ರಾಜಕುಮಾರ, ನೀನು ಶತ್ರುಪುತ್ರನಲ್ಲ; ಸನ್ಮಿತ್ರಪುತ್ರನು. ನಾನು ನಿನ್ನ ತಂದೆಗೆ ಅವನ ರಾಜ್ಯವನ್ನೊಪ್ಪಿಸುವೆನು. ಇಷ್ಟಲ್ಲದೆ, ನೀನು ಏನು ಬೇಡುವೆಯೋ ಅದನ್ನು ಕೊಡಲಿಕ್ಕೆ ನನ್ನ ಸಿದ್ಧತೆಯಿದೆ.''

"ನಾನು ಬೇಡಿದ್ದನ್ನು ಕೊಡುವಿರಾ?''

"ಓಹೋ! ನೀನು ಏನು ಬೇಡುವೆಯೋ ಅದನ್ನು ಕೊಡುವೆನು; ನಿಶ್ಚಯವಾಗಿಯೂ ನಾನು ನಿನ್ನ ಬೇಡಿಕೆಯನ್ನು ಪೂರೈಸುವೆನು.''

"ಸಮ್ರಾಟರೆ, ನೀವು ಸತ್ಯವಾಗಿ ಪ್ರತಿಜ್ಞಾಬದ್ಧರಾದಿರಾ?"

"ನಾನು ನಿನಗೆ ವಚನಕೊಟ್ಟಿರುವೆನು ಸತ್ಯವ್ರತನಾದ ಪ್ರಿಯದರ್ಶಿ ಸಮ್ರಾಟನು ಎಂದೂ ವಚನಭಂಗ ದೋಷಕ್ಕೆ ಪಾತ್ರನಾಗಲಾರನು''

"ಹಾಗಾದರೆ ನೀವು ನನಗೆ ಬೇಡಿದ ವಸ್ತುವನ್ನು ಕೊಡುವಿರೆಂದಂತಾಯಿತು.''

"ನಿಸ್ಸಂಶಯ ಈ ಸಿಂಹಾಸನವನ್ನು ಬೇಡಿದರೂ ಕೊಡುವೆನು."

"ಸಾರ್ವಭೌಮ ಸಿಂಹಾಸನದ ವರೆಗೆ ಮಾತು ಬೇಡ.'' ರಾಜಕುಮಾರನು ಸಮ್ರಾಟನ ಮೇಲೆ ನೇತ್ರಕಟಾಕ್ಷವನ್ನು ಬೀರಿದನು

"ಪ್ರಾಣವನ್ನೂ ಶರೀರವನ್ನೂ ನಿನಗೆ ಒಪ್ಪಿಸಿರುವೆನು. ಪ್ರೀತಿಯ ರಾಜಕುಮಾರಾ, ನೀನು ಒಳ್ಳೆಯ ಆಕರ್ಷಕನಿರುವೆ. ನಿನ್ನ ಕೈಯನ್ನು ಕೊಡು."

"ಮಹಾರಾಜರೆ, ನಿಮ್ಮ ಶರೀರವೂ ಪ್ರಾಣವೂ ನನ್ನ ವಶವಾದವು. ಇಕೊಳ್ಳಿರಿ, ಈ ನನ್ನ ಎರಡೂ ಕೈಗಳನ್ನು ನಿಮ್ಮ ಸ್ವಾಧೀನಪಡಿಸಿರುವೆನು."

ಅಷ್ಟರಲ್ಲಿ ಆಚಾರ್ಯ ಉಪಗುಪ್ತನು ಅಲ್ಲಿಗೆ ಒಂದು ಉಚ್ಚ ಸ್ವರದಿಂದ: "ಚಕ್ರವರ್ತಿಯೇ, ಯೋಗ್ಯವು, ಪರಮ ಯೋಗ್ಯವು!"

ಅಶೋಕನು ಹಿಂದೆ ಸರಿದನು. ರಾಜಕುಮಾರನಾದರೂ ಬೆದರಿ ನಾಲ್ಕು ಹೆಜ್ಜೆ ಹಿಂದಕ್ಕೆ ಇಟ್ಟನು ಚಕ್ರವರ್ತಿಯು ಆಚಾರ್ಯನಿಗೆ ನಮಸ್ಕಾರ ಮಾಡಿ:—"ಮಹೋದಯರೆ, ಇವನು ಕಲಿಂಗ ರಾಜಕುಮಾರನು. ಈ ಜಿತೇಂದ್ರನಿಗೆ ಕಲಿಂಗ ರಾಜ್ಯವನ್ನೊಪ್ಪಿಸಿರುವದಲ್ಲದೆ, ನನ್ನ ದೇಹವನ್ನೂ ದೇಹಾಂತರ್ಗತ ಪ್ರಾಣವನ್ನೂ ಸಮರ್ಪಿಸಿರುವೆನು. ಇವನು ನನ್ನ ಆತ್ಮ ಸ್ವಾಮಿಯು. ರಾಜಕುಮಾರ, ಆಚಾರ್ಯನಿಗೆ ನಮಿಸು"

ರಾಜಕುಮಾರನು ನಮಿಸಿದನು. ಆಚಾರ್ಯನು ಅವನಿಗೆ ಆಶೀರ್ವಾದವಿತ್ತನು ಆಗ ರಾಜಕುಮಾರನು ವಿಸ್ಮಯದಿಂದ:—"ಶ್ರೀ-ಸ್ಥವಿ-ರ ಉಪಗುಪ್ತ" ಎಂದು ಮೆಲ್ಲನೆ ಉದ್ಗಾರ ತೆಗೆದನು. ಆಗ ಉಪಗುಪ್ತನು: "ಸಮ್ರಾಟ್, ನಿನ್ನ ದೇಹವೂ ಆತ್ಮವೂ ಸತ್ಪಾತ್ರದಲ್ಲಿ ಸೇರಿದವು ನೀನು ನಿನ್ನ ಕೈಯಿಂದ ಈ ಪವಿತ್ರವಾದ ಕೈಗಳನ್ನು ಹಿಡಿ"

ಉಪಗುಪ್ತನು ರಾಜಕುಮಾರನ ಕೈಗಳನ್ನು ತೆಗೆದುಕೊಂಡು ಅಶೋಕನ ಕೈಯಲ್ಲಿರಿಸ ಹೋದನು. ರಾಜಕುಮಾರನು ಲಜ್ಜೆಯಿಂದ ಆರಕ್ತ ವದನನಾಗಿ ಹಿಂದೆ ಸರಿದನು. ಆಗ ಉಪಗುಪ್ತನು ನಸುನಗುತ್ತ:— "ಕಲಿಂಗರಾಜಕುಮಾರೀ, ಶೀಲಾದೇವೀ! ನೀವಾಗಿ ಕ್ರಯ-ವಿಕ್ರಯ ಮಾಡಿಕೊಂಡಿರುವಾಗ, ಇಷ್ಟೇಕೆ ಸಂಕೋಚವು? ನಿಮ್ಮ ಕೈಗಳನ್ನು ಮಹಾರಾಜರ ಕೈಯಲ್ಲಿ ಕೊಡಿರಿ."

ಸಮ್ರಾಟನ ವಿಸ್ಮಯವು ಮೇರೆದಪ್ಪಿತು ಆಗ ಅವನು:—"ಆಚಾರ್ಯರೆ, ಇದೇನು ಹೇಳುವಿರಿ? ಕಲಿಂಗಮಹಾರಾಜಕುಮಾರಿ ಶೀಲಾದೇವಿಯು ಛದ್ಮವೇಷದಿಂದ ಇಲ್ಲಿಗೆ ಬಂದಿರುವಳೆ? ಇವಳು ಶೀಲಾದೇವಿಯೊ?"

"ಸಮ್ರಾಟ, ನಿಜವು. ಇವರು ಶೀಲಾದೇವಿಯವರು." ಎಂದು ನುಡಿದು, ಆಚಾರ್ಯ ಉಪಗುಪ್ತನು ಶೀಲಾದೇವಿಯನ್ನು ಕುರಿತು:—"ದೇವಿ, ನೀವು ಇನ್ನು ಬೇಗನೆ ಈ ವೇಷವನ್ನು ತ್ಯಜಿಸಿ ಬನ್ನಿರಿ."

ಪರಕ್ಷಣದಲ್ಲಿ ಶೀಲಾದೇವಿಯು ನಿಜವೇಷದಿಂದ ಅಲ್ಲಿಗೆ ಬಂದಳು. ಶೀಲಾದೇವಿ-ಅಶೋಕರು ಪರಸ್ಪರರಿಗೆ ಆತ್ಮಸಮರ್ಪಣ ಮಾಡಿದರು ಇಬ್ಬರ ಆತ್ಮಗಳೂ ಒಂದಾದವು. ಆಚಾರ್ಯ ಉಪಗುಪ್ತನು ಶೀಲಾದೇವಿಯ ಕೈಗಳನ್ನು ಅಶೋಕನ ಕೈಯಲ್ಲಿ ಕೊಟ್ಟನು. ಕೂಡಲೆ ಆ ಇಬ್ಬರೂ ಪ್ರಣಯಿಗಳ ಹೃದಯಸ್ಪಂದನವು ಕ್ಷಣಹೊತ್ತಿನವರೆಗೆ ನಿಂತೇಹೋಯಿತು. ಮುಂದೆ ಸ್ವಲ್ಪ ವೇಳೆಯ ಮೇಲೆ ಅಶೋಕನು:—"ಆಚಾರ್ಯಮಹಾಶಯರೆ, ನನ್ನ ಕುಕರ್ಮಕ್ಕಾಗಿ ಸುಫಲವು ಹೇಗೆ ದೊರೆಯಿತು?"

"ಸಾರ್ವಭೌಮಾ, ಇದು ಸುಕರ್ಮದ ಫಲವು. ನೀನು ಶೀಲಾದೇವಿ ಯವರನ್ನು ಪಾಣಿಗ್ರಹಣ ಮಾಡಿದ್ದು ಸುಕರ್ಮದ ಫಲವಲ್ಲದೆ, ಕುಕರ್ಮ ದಿಂದ ಇಂತಹ ಅವ್ಯತೋಪಸಮ ಸಂಧಿಯು ಹೇಗೆ ದೊರೆಯಿತು? ನಿನ್ನ ಹೃದಯ ಪರಿವರ್ತನಹೊಂದಿದಂದಿನಿಂದಲೆ ನಿನ್ನ ಸುಕರ್ಮಕ್ಕೆ ಪ್ರಾರಂಭ ವಾಗಿರುವದು." ಎಂದು ಆಚಾರ್ಯನು ನುಡಿದು:—"ಅಗೋ, ಅಲ್ಲಿ ಕಲಿಂಗ ರಾಜಕುಮಾರ ಜಿತೇಂದ್ರನೂ ಕಲಿಂಗಮಹಾರಾಜ ಮಹೇಂದ್ರನೂ ಬರುತ್ತ ಲಿರುವರು. ಅವರಿರ್ವರನ್ನೂ ಸ್ವಾಗತಿಸು."

ಸಮ್ರಾಟನು ಇಬ್ಬರನ್ನೂ ಕರೆತಂದು ಯೋಗ್ಯವಾದ ಆಸನಗಳಲ್ಲಿ ಕುಳ್ಳಿರಿಸಿ, ಮಹೇಂದ್ರನ ಪಾದಗಳ ಮೇಲೆ ಮಸ್ತಕವಿರಿಸಿದನು ಮಹೇಂ ದ್ರನು ಪರಮಾನಂದಭರಿತನಾಗಿ ಅವನನ್ನು ಹಿಡಿದೆತ್ತಿ ಬಿಗಿದಪ್ಪಿದನು. ಇಬ್ಬರೂ ನೃಪತಿಗಳು ತನುಮನಗಳಿಂದ ಒಂದಾಗಿ ಹೋದರು ಅನಂತರದಲ್ಲಿ ಆಚಾರ್ಯನು ಸರ್ವರ ಸಮ್ಮುಖದಲ್ಲಿ ರಾಜಕುಮಾರಿಯ ಸ್ವಾರ್ಥತ್ಯಾಗದ ಚರಿತ್ರವನ್ನು ನಿವೇದಿಸಿದನು. ತನ್ನ ಪ್ರೀತಿಯ ಪುತ್ರಿಯಾದ ಶೀಲೆಯ ಅದ್ವಿತೀಯ ಸ್ವಾರ್ಥತ್ಯಾಗದಿಂದ ತನ್ನ ಭಾಗ್ಯೋದಯವಾಯಿತೆಂದು ಮಹೇಂ ದ್ರನು ಸಂಭ್ರಮಗೊಂಡು ಅವಳನ್ನು ಬಿಗಿದಪ್ಪಿದನು. ಅನಂತರದಲ್ಲಿ ಅವನು ತನ್ನ ಪುತ್ರಿಯ ಕೈಗಳನ್ನು ಸಮ್ರಾಟನ ಕೈಯಲ್ಲಿ ಕೊಟ್ಟು—"ಸಮ್ರಾಟರೆ, ನನ್ನ ಪ್ರಿಯಪುತ್ರಿಯ ಪಾಣಿಗ್ರಹಣ ಮಾಡಿರಿ. ಆಚಾರ್ಯ ಉಪಗುಪ್ತರ ತಪೋಬಲದಿಂದಲೂ ಸ್ವಾರ್ಥತ್ಯಾಗದಿಂದಲೂ ನನ್ನ ಕುಮಾರಿಯ ಸಾಹಸ ದಿಂದಲೂ ನಾನು ಸುದಿನಗಳನ್ನು ಕಂಡೆನು."

ಸಮ್ರಾಟನು ನತಮಸ್ತಕನಾಗಿ ಶೀಲಾದೇವಿಯ ಪಾಣಿಗ್ರಹಣಮಾಡಿ ದನು ಸಾಮ್ರಾಜ್ಯದ ತುಂಬ ಆನಂದೋತ್ಸವಗಳು ನಡೆದವು. ಕಲಿಂಗ ರಾಜನು ವಾನಪ್ರಸ್ಥವನ್ನು ಸ್ವೀಕರಿಸಿ ಅರಣ್ಯವಾಸಿಯಾದನು. ರಾಜ ಕುಮಾರ ಜಿತೇಂದ್ರನು ಕಲಿಂಗರಾಜಸಿಂಹಾಸನದಲ್ಲಿ ವಿರಾಜಿತನಾದನು.




ಮುದ್ರಕ:—ಭಿ. ಪ. ಕಾಳೆ, ಶ್ರೀ ಶೇಷಾಚಲ ಪ್ರೆಸ್ಸ, ಆನಂದವನ-ಅಗಡಿ

## ನಾಗೇಶ ರಂಗೋ ಕುಲಕರ್ಣಿ ಇವರಿಂದ ಬರೆಯಲ್ಪಟ್ಟ ಪುಸ್ತಕಗಳು.

### ಐತಿಹಾಸಿಕ

| | | |
|---|---|---|
| ೧ | ಅಮಾತ್ಯ ರಾಕ್ಷಸ | ೪ ಆಣೆ |
| ೨ | ಆತ್ಮ ಬಲಿ. | ೧ ರೂ. |
| ೩ | ಈಶಸಂಕಲ್ಪ | ೧೪ ಆಣೆ |
| ೪ | ಊರ್ಮಿಳೆ | ೧೨ ಆಣೆ |
| ೫ | ಎಚ್ಚಮನಾಯಕ | ೮ ಆಣೆ |
| ೬ | ಗೆಲುವಿನ ಕತ್ತಿ | ೧೨ ಆಣೆ |
| ೭ | ಚಾಲುಕ್ಯರ ಅಭ್ಯುದಯ | ೧೨ ಆಣೆ |
| ೮ | ಪತಿತೋದ್ಧರಣ | ೪ ಆಣೆ |
| ೯ | ಪ್ರಾರಬ್ಧ ಪ್ರಹಾರ | ೪ ಆಣೆ |
| ೧೦ | ಪರಾವರ್ತನ | ೮ ಆಣೆ |
| ೧೧ | ಭಯಂಕರ ಸೇಡು | ೧ ರೂ. ೮ ಆಣೆ |
| ೧೨ | ಭಾಗ್ಯೋದಯ | ೮ ಆಣೆ |
| ೧೩ | ಮಾತೃಭೂಮಿಗಾಗಿ | ೩ ಆಣೆ |
| ೧೪ | ರಕ್ತಸಿಂಚನ | ೨ ಆಣೆ |
| ೧೫ | ರಾಣೀ ಕುರಂಗಿ | ೩ ಆಣೆ |
| ೧೬ | ರಾಣೀ ಅರುಣಕುಮಾರಿ | ೧ ರೂ. |
| ೧೭ | ವೀರಕುಮಾರಿ ಕನಕಲತೆ | ೩ ಆಣೆ |
| ೧೮ | ಸತ್ಯಮೇವ ಜಯತೆ | ೧೨ ಆಣೆ |

### ಪತ್ತೆದಾರಿ

| | | |
|---|---|---|
| ೧೯ | ಮೋಹಿನಿ | ೧ ರೂ. ೮ ಆಣೆ |
| ೨೦ | ಮಾಯಾವತಿ | ೧ ರೂ. ೪ ಆಣೆ |

### ಪೌರಾಣಿಕ

| | | |
|---|---|---|
| ೨೧ | ಸತೀ ಸುಕನ್ನೆ | ೮ ಆಣೆ |
| ೨೨ | ಸತೀ ಸೀಮಂತಿನಿ | ೨ ಆಣೆ |

---